ವಿಶೇಷ ವಾಙ್ಮಯ ಪ್ರಸಾರ ಪುಸ್ತಕಮಾಲೆ-೨೩

೨೩

# ಅ.ನ.ಕೃ. ಸಾಹಿತ್ಯ ಸಮೀಕ್ಷೆ

ಏಳು ಉಪನ್ಯಾಸಗಳು




ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೧೯೮೭

ವಿಶೇಷ ವಾಙ್ಮಯ ಪ್ರಸಾರ ಪುಸ್ತಕಮಾಲೆ–೨೩

# ಅ.ನ.ಕೃ. ಸಾಹಿತ್ಯ ಸಮೀಕ್ಷೆ

## ಏಳು ಉಪನ್ಯಾಸಗಳು


- ದೇವೇಂದ್ರಕುಮಾರ ಹಕಾರಿ
- ಪ್ರಲ್ಹಾದಕುಮಾರ ಭಾಗೋಜಿ
- ಕೃಷ್ಣಮೂರ್ತಿ ಪುರಾಣಿಕ
- ಶ್ಯಾಮಸುಂದರ ಬಿದರಕುಂದಿ
- ಜಿ.ಎಸ್. ಕಾಪಸೆ
- ಎಸ್.ಎಸ್. ಕೋತಿನ
- ಎಚ್.ಜಿ. ಲೋಕೂರ





ಪ್ರಸಾರಾಂಗ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೯೮೭

ಪ್ರಕಾಶಕರು :
ಎಸ್. ಬಿ. ನಾಯಕ
ನಿರ್ದೇಶಕರು
ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ



ಪ್ರಥಮ ಮುದ್ರಣ : ೧೧೦೦ ಪ್ರತಿಗಳು
ಮಾರ್ಚ, ೧೯೮೭

ಬೆಲೆ : ರೂ ೬-೦೦

ಮುದ್ರಕರು :
ಸುನೀಲಕುಮಾರ ಜೋಶಿ
ಸುನೀಲಕುಮಾರ ಪ್ರಿಂಟಿಂಗ್ ಪ್ರೆಸ್,
ರಜತಗಿರಿ, ಧಾರವಾಡ–೫೮೦೦೦೪

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯದ "ಪ್ರಸಾರಾಂಗ"ವು ಪ್ರೌಢವಾದ ಸಂಶೋಧನಾತ್ಮಕ ಗ್ರಂಥಗಳನ್ನೂ, ಪತ್ರಿಕೆಗಳನ್ನೂ ಪ್ರಕಟಿಸುವುದರ ಜೊತೆಗೆ ಸಾಮಾನ್ಯ ಜನತೆಗಾಗಿ ಹಲವು ಜ್ಞಾನಪ್ರಸಾರ ಯೋಜನೆಗಳನ್ನೂ ಕೈಕೊಂಡಿದೆ. ಸಂಚಾರಿ ವಾಚನಾಲಯ ಹಾಗೂ ಗ್ರಾಮಾಂತರ ಉಪನ್ಯಾಸ ಶಿಬಿರಗಳು ಊರೂರಿಗೆ ಜ್ಞಾನವಾಹಿನಿಯನ್ನು ಕೊಂಡೊಯ್ಯುವಲ್ಲಿ ಉಪಯುಕ್ತವಾದ ಕಾರ್ಯವನ್ನು ನಿರ್ವಹಿಸುತ್ತಿವೆ. ಉಪನ್ಯಾಸ ಗ್ರಂಥಮಾಲೆಯ ವಿವಿಧ ವಿಷಯಗಳ ಮೇಲಿನ ಚಿಕ್ಕ ಚಿಕ್ಕ ಪುಸ್ತಕಗಳು ಜನರ ಮೆಚ್ಚಿಕೆಗೆ ಪಾತ್ರವಾಗಿ ಅವರ ಜ್ಞಾನ ಸಂವರ್ಧನೆಗೆ ಪೋಷಕವಾಗಿವೆ. ವಿಶ್ವವಿದ್ಯಾಲಯ ಹಾಗೂ ಜನಸಾಮಾನ್ಯರ ನಡುವೆ ಬೆಳೆಯುತ್ತಿರುವ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಸಂಪರ್ಕ, ಈ ಶಾಖೆಯ ಕಾರ್ಯದಕ್ಷತೆಗೆ ನಿದರ್ಶನವಾಗಿದೆಯೆಂದು ಹೇಳಬಹುದು.

ಪೂರ್ಣ ವಿದ್ಯಾಪರಿಣತರಲ್ಲದಿದ್ದರೂ ಅಭ್ಯಾಸದಲ್ಲಿ ವಿಶೇಷ ಅಭಿರುಚಿಯುಳ್ಳ ವಿದ್ಯಾವ್ಯಾಸಂಗಿಗಳ ಸಂಖ್ಯೆ ನಮ್ಮ ನಾಡಿನಲ್ಲಿ ಸಾಕಷ್ಟು ಪ್ರಮಾಣದಲ್ಲಿದೆ. ಇಂಥವರ ಜ್ಞಾನಾರ್ಜನೆಗೆ ಸಹಾಯಕವಾಗುವಂತೆ ಯೋಜನೆಯೊಂದನ್ನು ರೂಪಿಸಿ ವಿಶೇಷ ವಾಙ್ಮಯ ಪ್ರಸಾರೋಪನ್ಯಾಸ ಶಿಬಿರಗಳನ್ನು ವಿಶ್ವವಿದ್ಯಾಲಯ ಕಳೆದ ಹಲವಾರು ವರ್ಷಗಳಿಂದ ನಡೆಸುತ್ತ ಬಂದಿದೆ. ಇವುಗಳಲ್ಲಿ ಭಾಗವಹಿಸಲು ಕರ್ನಾಟಕ ವಿಶ್ವವಿದ್ಯಾಲಯದ ಪ್ರಾಧ್ಯಾಪಕರೊಂದಿಗೆ ರಾಜ್ಯದ ಇನ್ನುಳಿದ ವಿಶ್ವವಿದ್ಯಾಲಯಗಳ ಪ್ರಾಧ್ಯಾಪಕರನ್ನೂ ಆಮಂತ್ರಿಸಲಾಗುತ್ತಿದೆ. ಇವುಗಳಿಗೂ ಜನತೆಯಿಂದ ತುಂಬ ಪ್ರೋತ್ಸಾಹ ದೊರೆಯುತ್ತಿದ್ದು, ವಿಶ್ವವಿದ್ಯಾಲಯದ ಜ್ಞಾನಪ್ರಸಾರದ ಧ್ಯೇಯ ಹೀಗೆ ಉಭಯಮುಖವಾಗಿ ಈಡೇರುವಂತಾಗಿದೆ. ಒಂದು ವಿಷಯದ ವಿವಿಧ ಮುಖಗಳನ್ನು ಕುರಿತು, ತಜ್ಞರಾದವರು ಈ ಶಿಬಿರಗಳಲ್ಲಿ ಉಪನ್ಯಾಸ

ಗಳನ್ನು ಕೊಡುವುದರಿಂದ ಈ ವಿಷಯದ ಸ್ಪಷ್ಟ ಕಲ್ಪನೆ ಕೇಳುಗರಿಗೆ ಉಂಟಾಗುವುದಲ್ಲದೆ ವಿಶೇಷ ಅಭ್ಯಾಸಿಗಳಿಗೂ ಇದರಿಂದ ನೆರವು ದೊರೆಯಬಲ್ಲದು.

ಉಪನ್ಯಾಸ ಗ್ರಂಥಮಾಲೆಯ ಪುಸ್ತಕಗಳಂತೆಯೇ ವಿಶೇಷ ವಾಙ್ಮಯ ಪ್ರಸಾರೋಪನ್ಯಾಸಗಳನ್ನೂ ಗ್ರಂಥರೂಪದಲ್ಲಿ ಪ್ರಕಟಿಸಿ, ಸುಲಭ ಬೆಲೆಯಲ್ಲಿ ಜನತೆಗೆ ಒದಗಿಸುವ ಯೋಜನೆಯನ್ನು ವಿಶ್ವವಿದ್ಯಾಲಯದ 'ಪ್ರಸಾರಾಂಗ' ಕೈಕೊಂಡಿದೆ.

ಈ ಎಲ್ಲ ಯೋಜನೆಗಳನ್ನು ಸಮಗ್ರವಾಗಿ ರೂಪಿಸಿ ಸಮುಚಿತವಾದ ರೀತಿಯಲ್ಲಿ ಕಾರ್ಯರೂಪಕ್ಕೆ ತಂದು ಎಲ್ಲ ಹಂತದಲ್ಲಿಯೂ ಅವುಗಳನ್ನು ಯಶಸ್ವಿಯಾಗಿ ನಿರ್ವಹಿಸಿಕೊಂಡು ಬರುತ್ತಿರುವ ಪ್ರಸಾರಾಂಗದ ನಿರ್ದೇಶಕರೂ ಹಾಗೂ ಅವರ ಸಹಾಯಕ ಸಿಬ್ಬಂದಿಯವರೂ ಅಭಿನಂದನೆಗೆ ಪಾತ್ರರಾಗಿದ್ದಾರೆ.

ಕನ್ನಡ ಕಾದಂಬರಿ ಸಾಹಿತ್ಯ ಸಾರ್ವಭೌಮ ಅ.ನ.ಕೃ. ಅವರ ಸಾಹಿತ್ಯ ಕುರಿತು ಅಥಣಿಯ ಸಾಹಿತ್ಯ ಸಾಂಸ್ಕೃತಿಕ ಸಂಘ ಹಾಗೂ ಎಸ್.ಎಸ್.ಎಂ. ಆರ್ಟ್ಸ ಸಾಯನ್ಸ ಮತ್ತು ಕಾಮರ್ಸ ಕಾಲೇಜಿನ ಸಂಯುಕ್ತ ಆಶ್ರಯದಲ್ಲಿ "ಅ.ನ.ಕೃ. ಸಾಹಿತ್ಯ ಸಮೀಕ್ಷೆ" ಎಂಬ ವಿಷಯವನ್ನು ಕುರಿತು ವಿದ್ವಾಂಸರಿಂದ ಏಳು ಉಪನ್ಯಾಸಗಳನ್ನು ಏರ್ಪಡಿಸಲಾಗಿದ್ದಿತು. ಈ ಉಪನ್ಯಾಸಗಳೆಲ್ಲ ಸಂಗ್ರಹಗೊಂಡು ಪುಸ್ತಕ ರೂಪದಲ್ಲಿ ಇದೀಗ ಪ್ರಕಟಗೊಳ್ಳುತ್ತಿರುವುದು ಸಂತೋಷದ ಸಂಗತಿ. ಅ.ನ.ಕೃ. ಅವರ ಬಹುಮುಖ ವ್ಯಕ್ತಿತ್ವವನ್ನು ಅರಿಯ ಬಯಸುವವರಿಗೆ ಈ ಕೃತಿ ನೆರವಾಗುವುದರಲ್ಲಿ ಸಂದೇಹವಿಲ್ಲ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಎಸ್. ಜಿ. ದೇಸಾಯಿ
ಕುಲಪತಿಗಳು

# ಪರಿವಿಡಿ

# ಅ. ನ. ಕೃ. ಅವರ ಸಣ್ಣಕತೆಗಳು

—ದೇವೇಂದ್ರಕುಮಾರ ಹಕಾರಿ

೧) 'ಕತೆ ಕತೆ ಕಬ್ಬು. ಮೈಯೆಲ್ಲ ಜಿಬ್ಬು' ಎನ್ನುವ ಜನಪದ ಗಾದೆ ಕತೆಗೂ ನಮ್ಮ ಜನಾಂಗಕ್ಕೂ ಇರುವ ಪ್ರಾಚೀನ ಸಂಬಂಧವನ್ನು ಸೂಚಿಸುತ್ತದೆ. ಕಬ್ಬು ತಿಂದಾಗ ಕೈ ಮೈ ಎಲ್ಲ ಜಿಬ್ಬು ಜಿಬ್ಬು; ಕತೆ ಕೇಳಿದಾಗ ಮನಸ್ಸೆಲ್ಲ ಸವಿ ಸವಿ. ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ಆದಿಕಾಲದಿಂದ ಮೌಖಿಕ ಪರಂಪರೆಯ ಮೂಲಕ ಬೆಳೆದು ಬಂದ ಕತೆ ಹೇಳುವ-ಕೇಳುವ ಸಂಪ್ರದಾಯ, ನಾಗರಿಕತೆ ವಿಕಾಸಗೊಂಡು, ಶಿಷ್ಟಪದ ಸಮಾಜ ರೂಪು ತಳೆದು ಮೇಲೂ ಒಂದು ಅತ್ಯಂತ ಪ್ರಮುಖ ಸಾಹಿತ್ಯ ಪ್ರಕಾರವಾಗಿ ನಮ್ಮ ಸಂಸ್ಕೃತಿಯ ಸಂವಾಹಕವಾಗಿ ಬೆಳೆದು ಬಂದಿತು. ಅಮೇರಿಕಾ ದೇಶದ ಸಣ್ಣ ಕತೆಗಳನ್ನು 'ಒಂದು ರಾಷ್ಟ್ರೀಯ ಕಲಾರೂಪ' ಎಂದು ಕರೆಯಲಾಗಿದೆ.[1] ಎ. ವಾಲ್ಟನ್‌ಲಿಟ್ಜ್ 'ಅದು ನಮ್ಮ ಸಾಹಿತ್ಯ ಮತ್ತು ಸಾಂಸ್ಕೃತಿಕ ವಿಕಾಸದ ಒಂದು ನಂಬಿಕಸ್ತ ದಾಖಲೆ' ಎಂದು ಹೇಳುತ್ತಾರೆ.[2] ಈ ಮಾತು ಭಾರತೀಯ ಕಥಾಸಾಹಿತ್ಯ ಪ್ರಕಾರಕ್ಕೂ ಅನ್ವಯಗೊಳ್ಳುತ್ತದೆ. ಜನಾಂಗ ಪರಂಪರೆಯಲ್ಲಿ ಹರಿದು ಬಂದ ಜನಪದ ಕತೆ, ಶಿಷ್ಟಪದ ಕೃತಿಗಳಲ್ಲಿ ಪುಷ್ಟಿಗೊಂಡು ಬೆಳೆದು ಬಂದರೂ ಇಂದು ನಾವು ಕರೆಯುತ್ತಿರುವ 'ಸಣ್ಣ ಕತೆ'ಗಳ ರೂಪ ಖಚಿತವಾಗಿ ಮೈದಾಳಿದ್ದು, ತನ್ನದೇ ಆದ ಪ್ರತ್ಯೇಕ ಗುಣ ಲಕ್ಷಣಗಳನ್ನು ಹೊಂದಿದ್ದು ಆಂಗ್ಲಸಾಹಿತ್ಯದ ಸಂಪರ್ಕ ಪ್ರಭಾವದಿಂದ.

---

1. 'Frank O' connor on Irishman with an acute sense of national values once called the American short story "a national art form"
   ' Major American short stories' (Edit. A walton litz Allied Publishers, Private Ltd.) : Preface. 1974
2. A.walton Litz: Major American short stories. :Preface. 1974(Edit. A. walton Litz, Allied Publishers :Private Ltd).

೨) ಅಮೇರಿಕಾ ಇಂಗ್ಲೆಂಡ್ ಮುಂತಾದ ದೇಶಗಳಲ್ಲಿ ಹದಿನೆಂಟನೆಯ ಶತಮಾನದಲ್ಲಿಯೇ ಪ್ರಚಲಿತವಾದ ವಾಷಿಂಗ್ಟನ್ ಇರ್ವಿಂಗ್ (೧೭೮೩-೧೮೫೯)- ನಾಥಾನಿಯಲ್ ಹಾಥಾರ್ನ್ (೧೮೦೪-೧೮೬೪) ಕಥಾ ಸಾಹಿತ್ಯ ಪ್ರಕಾರ ಭಾರತದಲ್ಲಿ- ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಕಾಣಿಸಿಕೊಂಡದ್ದು ಹತ್ತೊಂಬತ್ತು ಕಳೆದು ಇಪ್ಪತ್ತನೆಯ ಶತಮಾನದ ಪೂರ್ವಾರ್ಧದಲ್ಲಿ. ಕನ್ನಡ ಸಾಹಿತ್ಯದ ನವೋದಯಕಾಲದ–ಸು. ೧೯೦೦ ರಿಂದ ೧೯೩೦ –ರವ್ಯ ಸಂಪ್ರದಾಯ ಕಳೆದು, ಪ್ರಗತಿಶೀಲ ಸಾಹಿತ್ಯದ–ಸು ೧೯೩೦–೧೯೫೫– ಅವಧಿಯಲ್ಲಿ ಸಣ್ಣಕತೆ ಸಾಹಿತ್ಯದ ಇತರ ಪ್ರಕಾರಗಳಂತೆ ತನ್ನ ಪ್ರತ್ಯೇಕ ಅಸ್ತಿತ್ವವನ್ನು ಗಟ್ಟಿಗೊಳಿಸಿಕೊಂಡಿತು. 'ಸಣ್ಣಕತೆಗಳ ಜನಕ' ಎಂದು ಹೆಸರಾದ ಮಾಸ್ತಿಯವರ ಆನಂದ, ಆನಂದಕಂದ ಮುಂತಾದವರ ಬಳುವಳಿಯನ್ನು, ಸಮಕಾಲೀನ ಬದುಕಿನ ಹೋರಾಟಗಳನ್ನು ಮೈಗೂಡಿಸಿಕೊಂಡ ಪ್ರಗತಿಶೀಲ ಸಾಹಿತ್ಯ ಚಳವಳಿಯ ಧೋರಣೆಗಳು, ಅ. ನ. ಕೃ. ಅವರಲ್ಲಿ ಪ್ರತಿಬಿಂಬಿತವಾಗುತ್ತ ನಡೆದವು. ಪ್ರಗತಿಶೀಲ ಚಳವಳಿಯ ಮುಂಚೂಣಿಯಲ್ಲಿ ನಿಂತ ಅ. ನ. ಕೃ. ಅವರ ಮಾನಸಿಕ ಪರಿವರ್ತನೆಗೆ ಬೆನ್ನೆಲುಬಾಗಿ ನಿಂತದ್ದು ಸ್ವಾಮಿ ವಿವೇಕಾನಂದರ "ನಿಮ್ಮ ದೇವರುಗಳು ಮಲಗಿ ನಿದ್ರಿಸುತ್ತಿವೆ. ಅವು ದೇವರಲ್ಲ. ನಮ್ಮೆದುರಿಗಿರುವ ಮಾನವ ಕೋಟಿ, ಪ್ರಾಣಿಕೋಟಿ ಇವೇ ನಮ್ಮ ದೇವರು. ನಾವು ಮೊದಲು ಪೂಜಿಸಬೇಕಾದುದು ನಮ್ಮ ದೇಶದ ಅಸಂಖ್ಯಾತ ಮಾನವತೆಯನ್ನು" ಎನ್ನುವ ಧೀರವಾಣಿ[3] ಈ ಚಳವಳಿಯ ಧೋರಣೆ-ಮೆಲ್ಲಮೆಲ್ಲನೆ ಅ.ನ.ಕೃ. ಅವರ ಸಣ್ಣ ಕತೆಗಳಲ್ಲಿ ಅನಾವರಣಗೊಳ್ಳುತ್ತ ನಡೆಯಿತು. ೧೯೨೯ ರಲ್ಲಿ ಅವರು ಬರೆದ 'ಸಾವಿತ್ರಿಯ ಸೌಭಾಗ್ಯ' ಕತೆಯಲ್ಲಿ ಇದು ತುಂಬ ಸೂಚ್ಯವಾಗಿ ವ್ಯಕ್ತವಾಗಿದೆ.

"ಸಾವಿತ್ರಿ ಬಹಳ ಒಳ್ಳೆಯ ಹುಡುಗಿ. ಚಂದುಳ್ಳ ಹೆಣ್ಣು ........' ಎಂದು ಆರಂಭವಾಗಿ ಅಗೋ! ಅಗೋ! ಅವಳು ಅಕ್ಕ! ಅಕ್ಕ! ಅಕ್ಕ ಬಂದಿರು

3. ಪಸಂಕೀರ್ತನ: ಪ್ರ-೯. ಸಂ: ಡಾ. ಎಂ. ಕೃಷ್ಣರಾಯ, ೧೯೭೦

ವಳು. ಅಲ್ಲಿ ನೋಡಪ್ಪಾ! ಅಮ್ಮನನ್ನು ತೋರಿಸುತ್ತೇನೆಂದು ನನ್ನನ್ನು ಕರೆಯುತ್ತಿರುವಳು! ಅಕ್ಕನ ಎದೆಯಿಂದ ರಕ್ತ ಬಂದಿದೆ ನೋಡಪ್ಪಾ......" ಎನ್ನುವ ಕಳವಳ ಬಡಬಡಿಕೆಯಿಂದ ಕೊನೆಗೊಳ್ಳುವ ವಿಧವೆಯ ಹೃದಯ ವಿದ್ರಾವಕ ವಸ್ತುವಿನ ಈ ಕತೆಯಲ್ಲಿ, ರಮ್ಯ ಸಂಪ್ರದಾಯದ ಸುಂದರ ಕಲ್ಪನೆ, ವಾಸ್ತವ ಕ್ರೌರ್ಯದ ಸ್ಪಂದನೆಗಳು, ಸಮ್ಮಿಲಿತಗೊಂಡಿರುವುದನ್ನು ಕಾಣುತ್ತೇವೆ. ರವೀಂದ್ರನಾಥ ಠಾಕೂರ, ಗಾಂಧೀಜಿ, ಷೆಲ್ಲಿ, ಷೇಕ್ಸ್‌ಪೀಯರ್, ತಾರಾನಾಥ, ಬರ್ನಾರ್ಡ್ ಷಾ, ಎಮಿಲಿ ಜೋವಾ ರೊಮೆ ರೋಲಾ, ಮೊಪಾಸಾ, ಆಂಪ್ರೆಜೀಡ್, ಜಾರ್ಜ್ ಸ್ಯಾಂಡ್, ಫ್ಲಾಬೊ ಗಾಯಿಟಿಯೆರ್ ಮೊದಲಾದ ವ್ಯಕ್ತಿಗಳ, ಲೇಖಕರ ವೈಚಾರಿಕ ಕ್ರಾಂತಿ ಯಿಂದ ಎಚ್ಚೆತ್ತ ಅ. ನ. ಕೃ. ಕನ್ನಡ ಬದುಕಿನ ಹೊಸ ಬಗೆಯ ಲೇಖಕ ರಾಗಿ ತೋರಿದರು. ಸಾಂಪ್ರದಾಯಿಕ ಮೌಢ್ಯಗಳನ್ನು ಕಿತ್ತೊಗೆಯಬೇಕು. ಪೊಳ್ಳಾದ ಸಮಾಜಕ್ಕೆ ಹೊಸ ಸೂಜಿ ಮದ್ದು ಕೊಡಬೇಕು. ಹೆಣ್ಣು ಪುರುಷನ ಭೋಗದ ವಸ್ತುವಾಗಿ ಕಣ್ಣೀರಲ್ಲಿ ಕೈತೊಳೆಯುತ್ತಿವುದನ್ನು ತಪ್ಪಿಸಬೇಕು. ಕಂಬನಿಯ ಕೂಳು ಸ್ವೀಕರಿಸುತ್ತ ಗೋಳಿಡುವ ಜನ ಸಾಮಾನ್ಯರ ಕೂಲಿ ಕಾರ್ಮಿಕರ ಹೃದಯವಿದ್ರಾವಕ ಶೋಷಣೆಯನ್ನು ತಪ್ಪಿಸಬೇಕು. ಫ್ರಾನ್ಸ್, ರಶಿಯಾ ಮುಂತಾದ ಕಡೆಯ ಲೇಖಕರು ಇಂಥ ಸಾಮಾಜಿಕ ಅನ್ಯಾಯ ಅತ್ಯಾಚಾರಗಳನ್ನು ನಾಶಪಡಿಸಲು ತಮ್ಮ ಲೆಕ್ಕಣಿಕೆಯನ್ನೇ ಕತ್ತಿಯಾಗಿ ಉಪಯೋಗಿಸುತ್ತಿರುವಾಗ ನಾವೇಕೆ ಹಿಂದೆ ಬೀಳಬೇಕು! 'ಹಾಗಾದರೆ ನನಗೂ ಅದೇ ಕರ್ತವ್ಯ. ನನ್ನ ಲೇಖನಿಗೂ ಅದೇ ಕರ್ಮಯೋಗ'.೪ ಪ್ರಗತಿಶೀಲ ಚಳವಳಿಯ ಧೋರಣೆಗಳು ನಾಡಿನ ಇತರ ಲೇಖಕರಲ್ಲಿಯೂ ಧುಮುಧುಮಿಸಿದವು. ಈ ಚಳವಳಿಗೆ ಶಾಶ್ವತ ರೂಪ ಕೊಡುವ ದೃಷ್ಟಿಯಿಂದ ಮತ್ತು ಜನತೆಗೆ ಅದರ ಸ್ಪಷ್ಟಸ್ವರೂಪವನ್ನು ತಿಳಿಸಿಕೊಡುವ ಗುರಿಯಿಂದ ಪ್ರೇರಿತರಾಗಿ ೧೯೪೩ರಲ್ಲಿ ಪ್ರಗತಿಶೀಲ ಲೇಖಕರ ಒಂದು ಸಂಘವನ್ನೇ ಕಟ್ಟಿದರು. ಈಗಾಗಲೇ ಕುಮಾರ ವೆಂಕಣ್ಣ, ಬಸವರಾಜ ಕಟ್ಟೀಮನಿ, ನಿರಂಜನ, ತರಾಸು ಮುಂತಾದ ಲೇಖಕರ ಒಂದು

೪) ರಸಚೇತನ : ಪ್ರ. ೧೫. ಸಂ. ಶಾ. ನಂ. ಕೃಷ್ಣರಾಯ. ೧೭೭೦.

ಪಡೆಯೇ ಪ್ರಗತಿಶೀಲ ಸಾಹಿತ್ಯದ ಸೃಷ್ಟಿಗಾಗಿ ಸಜ್ಜಾಗಿತ್ತು. ಪ್ರಗತಿಶೀಲ ಲೇಖಕರ ಚಳವಳಿಯ ಬಗೆಗೆ ಜನರಲ್ಲಿ ಒಲವು ಮೂಡುವುದರ ಜೊತೆಗೆ ವಿರೋಧವೂ ಪ್ರಬಲವಾಯಿತು. ಪ್ರಗತಿಶೀಲ ಲೇಖಕರ ಜೀವನ ದೃಷ್ಟಿಯನ್ನು ಎತ್ತಿಹಿಡಿದ ಅ. ನ. ಕೃ. "ಸಾಹಿತ್ಯವು ಅರಮನೆ ಗುರುಮನೆಗಳಲ್ಲೇ ಅಡಕವಾಗದೆ ಜನ ಸಾಮಾನ್ಯರ ಮನೆಗೂ ಹೋಗಬೇಕೆಂದು" ಸಾರಿದರು.[5] ಶರಣರು, ದಾಸರು, ಸರ್ವಜ್ಞ, ಜನಪದ ಹೀಗೆ ಹರಿದು ಬಂದ ಕನ್ನಡ ಸಾಹಿತ್ಯ ಪರಂಪರೆಯ ಗುಣ ಲಕ್ಷಣಗಳನ್ನು ಆಧುನಿಕ ವಿಚಾರಧಾರೆಗೆ ಅಳವಡಿಸಿ, ನಾಡಿನ ಉದ್ದಗಲ ಸಂಚರಿಸಿ ತಮ್ಮ ಕಂಚಿನ ಕಂಠದಿಂದ ಎಲ್ಲೆಡೆ ಮೊಳಗಿಸಿ ಜನತೆಯನ್ನು ಎಚ್ಚರಿಸಿದರು. ಹೀಗೆ ರಾಷ್ಟ್ರೀಯ ಸಾಹಿತ್ಯ ಪರಂಪರೆಯ ಜ್ಞಾನ ಮತ್ತು ಸಮಕಾಲೀನ ಜೀವನ ಸಮಸ್ಯೆಗಳ ಅರಿವುಗಳಿಂದ ಪ್ರೇರಿತರಾದ ಅಸ್ಪಷ್ಟರಾದ ಅ. ನ. ಕೃ. ಕನ್ನಡದ ಒಬ್ಬ ಪ್ರಜ್ಞಾವಂತ ಲೇಖಕ. ಈ ದೃಷ್ಟಿಯಿಂದ ಅವರ ಸಣ್ಣ ಕತೆಗಳಿಗೆ ಕನ್ನಡ ಸಾಹಿತ್ಯದಲ್ಲಿ ಒಂದು ಚಾರಿತ್ರಿಕ ಮಹತ್ವವಿದೆ.

೩) ಅ. ನ. ಕೃ. ಸಣ್ಣಕತೆಗಳನ್ನು ವಿವೇಚನೆಗೆ ಎತ್ತಿಕೊಳ್ಳುವ ಮೊದಲು ಸಣ್ಣ ಕತೆಯ ಸ್ವರೂಪ, ರಚನೆಗಳ ಬಗೆಗೆ ಕೆಲವು ಅಂಶಗಳ ವಿವರ ಅಗತ್ಯ.

ಕತೆಯೊಂದನ್ನು ಓದಿ ಮುಗಿಸಿದಾಗ ಅದರಲ್ಲಿ ಮೊದಲ ಹಂತಕ್ಕೆ ಕಂಡು ಬರುವುದು ಒಂದು ಘಟನೆ ಅಥವಾ ಪ್ರಸಂಗ. ಘಟನೆ ಬರಹಗಾರನ ಚಿತ್ತದ ಪಾತಳಿಯಲ್ಲಿ ಅಚ್ಚೊತ್ತಿ ನಿಲ್ಲುತ್ತದೆ; ಅದರ ಒತ್ತಡ ಅನಿವಾರ್ಯವಾಗಿ ಕತೆಗಾರ ಅದನ್ನು ವ್ಯಕ್ತಗೊಳಿಸುವ ಹಂತದಲ್ಲಿದ್ದಾಗ ಆ ಘಟನೆಯೇ ವಸ್ತುವಾಗುತ್ತದೆ. ಘಟನೆಯ ಪಾತ್ರ, ಪಾತ್ರಗಳ ಮನೋಭಾವ, ಅನಿಸಿಕೆ

೫. ರಬಕವಿ ಸಾಹಿತ್ಯ ಸಮ್ಮೇಳನ (೧೯೪೫). ಪ್ರೊ. ಬಸವನಾಳರ ಅಧ್ಯಕ್ಷತೆ. ಪ್ರಗತಿಶೀಲ ಸಾಹಿತ್ಯ ಕುರಿತ ಚರ್ಚೆಯನ್ನು ಸುಮಾರು ೧೮ ಜನ ವಿರೋಧಿಸಿದಾಗ ಅ. ನ. ಕೃ. ತರಾಸು ಮುಂತಾದವರು ತಮ್ಮ ವಿಚಾರ ಪ್ರಣಾಳಿಯನ್ನು ಮಂಡಿಸಿದಾಗ ಜನ ಅದನ್ನು ಮುಕ್ತಮನಸ್ಸಿನಿಂದ ಮೆಚ್ಚಿದರು. ಓಟಿಗೆ ಹಾಕಿದಾಗ ಇವರ ಪಕ್ಷಕ್ಕೇ ಜಯ. 'ತರಾಸು ಬದುಕು-ಬರಹ' ಪು. ೧೮ ಡಾ. ಎಂ. ಕೃಷ್ಣರಾಯ ೧೯೮೨.

ಗಳು ಸಂಯೋಜಿತಗೊಂಡು ಒಂದು ರೂಪ ಪಡೆಯುತ್ತವೆ. ಘಟನೆಗಳು ವಿಸ್ತೃತವಾದಂತೆ ಕಾಲ ಹಿಗ್ಗುತ್ತದೆ. ಘಟನೆ ಕಾಲದ ಒಂದು ಬಿಂದುವಿನಲ್ಲಿ ಕೇಂದ್ರೀಕೃತವಾದಾಗ ಪರಿಮಿತ ಅವಧಿಯಲ್ಲಿಯೇ ಜೀವನದ ಚಿಂತನೆ ಮೂಡುತ್ತದೆ. ಆದುದರಿಂದ ಘಟನೆಗಳ– ವಸ್ತು– ಪ್ರತಿರೂಪವನ್ನು ಸೃಜನಶೀಲತೆಗೆ ಅಳವಡಿಸಿದಾಗ ವ್ಯಕ್ತವಾಗುವ ಬರಹವನ್ನು ಈಲಿಯಟ್ 'ಕತೆ' ಎಂದು ಕರೆಯುತ್ತಾನೆ. ಸನ್ನಿವೇಶಗಳ ಬಣ್ಣನೆ, ಪಾತ್ರಗಳ ಮಾನಸಿಕ ತುಡಿತ, ಸಂದರ್ಭಗಳ ಅನಿರೀಕ್ಷಿತ ತಿರುವು ಇವುಗಳ ಮೂಲಕ ಕಥೆಗೆ ಕಲಾತ್ಮಕ ರೂಪ ಲಭ್ಯವಾಗುತ್ತದೆ. ಆಗ ಕಥಾಶಿಲ್ಪ ಸಂಕೇತ ಧ್ವನಿಗಳಿಂದ ಪುಷ್ಟಿಗೊಳ್ಳುತ್ತದೆ. ಜೊತೆಗೆ ಬದುಕಿನ ಸೂಕ್ಷ್ಮ ಸಂವೇದನೆಗಳ, ಸ್ಥಿತಿಗತಿಗಳ ಸುಸಂಬದ್ಧ ಸಂಯೋಜನೆಯಾಗುತ್ತದೆ.

ಕೆಲವೊಮ್ಮೆ ಕತೆಗಾರನ ಬದುಕಿನ ಹಂಬಲ, ನಂಬಿದ ಮೌಲ್ಯಗಳ ಸನ್ನಿವೇಶ ರಚನೆಯ ಸಂದಿಗ್ಧತೆಯ ದೃಷ್ಟಿ ಮತ್ತು ಕತೆಯ ಪರಿಮಿತರೂಪದಿಂದಾಗಿ ಕತೆಗಾರನಿಗೇ ಸವಾಲಾಗಿ ನಿಲ್ಲಬಹುದು. ಆಗ ಕತೆಗಾರ ಕಥನತಂತ್ರ, ನಿರೂಪಣೆಯ ಸಂಕೀರ್ಣತೆಗಳ ಮೂಲಕ ವಸ್ತು-ತಂತ್ರಗಳ ಹದವಾದ ಎರಕಗೊಳಿಸಿ ಇಂಥ ಸಂದಿಗ್ಧತೆ, ಸವಾಲುಗಳನ್ನು ಪರಿಹರಿಸಿಕೊಳ್ಳಬಹುದು. ಇಲ್ಲವಾದರೆ ಯಾವುದೇ ಕತೆ ಘಟನೆಯ ಒಂದು ವರದಿಯಾಗಬಹುದು ಅಷ್ಟೆ, ಮತ್ತು ವರದಿ ಕತೆ ಆಗಲಾರದು. ಘಟನೆ ಒಂದು ಬಿಂದು: ಪಾತ್ರದ ಮನಸ್ಸು ಸಿಂಧು. ಕತೆಯ ಪಾತ್ರದ ಭಾವನೆಗಳು ಅನಾವರಣಗೊಳ್ಳುತ್ತ ನಡೆದಂತೆ, ಅದು ತೊಡಗಿದ ಘಟನೆಯ ಸೂತ್ರ, ಪಾತ್ರಗಳ ಮಾನಸಿಕ ಪಾತಳಿಯ ಆಳದಲ್ಲಿ ಅತಿಸೂಕ್ಷ್ಮವಾಗಿ ಪ್ರವಹಿಸುತ್ತಿರುತ್ತದೆ. ಒಮ್ಮೊಮ್ಮೆ ಘಟನೆ ಸ್ಥಗಿತಗೊಂಡಂತೆಯೂ ತೋರಬಹುದು. ಒಂದು ಕತೆಯಲ್ಲಿ ಘಟನೆ ಮುಖ್ಯವೇ: ಆದರೆ ಕತೆಯನ್ನು ಓದುತ್ತ ಹೋದಂತೆ ಆ ಘಟನೆ ಕಾಣುತ್ತಿರಬೇಕು: ಕಾಣದಂತಿರಬೇಕು. ಪಾತ್ರಗಳ ಮೂಲಕ ಅದು ವ್ಯಕ್ತವಾಗುತ್ತಿರಬೇಕು: ಅನಿರೀಕ್ಷಿತ ತಿರುವು ಪಡೆಯಬೇಕು. ಒಮ್ಮೊಮ್ಮೆ ಇದೆಲ್ಲ ಹೇಗೆ ಸಾಧ್ಯ ಎನ್ನುವ ಪ್ರಶ್ನೆಯನ್ನು ಮೂಡಿಸುತ್ತಿರುವಂತೆಯೇ

ಪ್ರಶ್ನೆಯನ್ನು ಮೀರಿದ ಬಿಡಿಗನ್ನು ಚೆಲ್ಲಿ ಸಹಜತೆಯ ಮೋಡಿಯನ್ನು ಬೀಸಿ ಮುಂದುವರೆಯಬೇಕು. ಪಾತ್ರಗಳ ಜೀವಂತಿಕೆ, ಕುತೂಹಲಗಳ ಮುಖಾಂತರ ಬರೆಹಗಾರನ ಸುಪ್ತಮನೋಭೂಮಿಕೆಯ ಪಾತ್ರ ಪರಿಕಲ್ಪನೆ ಜೀವನಾನುಭವಗಳು, ವಿಶಿಷ್ಟವಾಗಿ ಸೃಷ್ಟಿಗೊಳ್ಳಬೇಕು. ವಸ್ತು ಪ್ರತಿರೂಪದ ಕಲಾತ್ಮಕ ಪುನಃಸೃಷ್ಟಿಯಾಗಬೇಕು. ಹೀಗಾಗಿ ಒಂದು ಸಣ್ಣ ಕತೆಯ ತ್ರಿಕೋಣಗಳೆಂದರೆ ವಸ್ತು, ಪಾತ್ರ, ಸನ್ನಿವೇಶ. ಒಂದು ಸಾರ್ಥಕ ಕತೆ ವಸ್ತುವಿನ ಸೂಕ್ಷ್ಮತೆ ಪಾತ್ರಗಳ ಬದುಕಿನ ಕಾಳಜಿ ಸನ್ನಿವೇಶದ ಜೀವಂತತೆಗಳನ್ನು ಅವಲಂಬಿಸುತ್ತದೆ. 'ಮೊಪಾಸಾನ ದಿ ನೆಕ್‌ಲೇಸ್' ಮಾಮ್‌ಸರ್ನ್' ಪರ್ಲ್‌ಬಕ್ ಅವರ 'ದಿ ಮೋವ್ ಗರ್ಲ್' ಮುಲ್ಕರಾಜರ 'ಕೂಲಿ' ಕೃಷ್ಣಚಂದರ 'ಪೇಶಾವರ್ ಎಕ್ಸ್‌ಪ್ರೆಸ್' ಖಾಜಾ ಅಹಮ್ಮದ್ ಅಬ್ಬಾಸರ 'ದಿಯಾಜಲೆ ಸಾರಿ ರಾತ್,' ರಜಿಯಾ ಸಜ್ಜಾದ ಜಹೀರ ಅವರ 'ಬಾಜಾ' ಪ್ರೇಮಚಂದರ 'ಪ್ರಕೃತಿ ಔರ ಪುರುಷ' ಆನಂದರ 'ನಾನು ಕೊಂದ ಹುಡುಗಿ' ಮಾಸ್ತಿಯವರ 'ಹೇಮಕೂಟದಿಂದ' ಬಂದಮೇಲೆ ಅ.ನ.ಕೃ. ಅವರ 'ಸಾಹಿತ್ಯ ಸಾರ್ವಭೌಮ' ತರಾಸು ಅವರ '೦-೦-೦' ಇತ್ಯಾದಿ ಕತೆಗಳಲ್ಲಿ ಸಾರ್ಥಕ ಸಣ್ಣ ಕತೆಯ ಅನೇಕ ಕಲಾತ್ಮಕ ಅಂಶಗಳನ್ನು ಗುರುತಿಸಬಹುದಾಗಿದೆ. ಭಾರತೀಯ ಕತೆಗಾರರ ಬಗ್ಗೆ ಹೇಳುವುದಾದರೆ, ಪ್ರಗತಿಶೀಲ ಚಳವಳಿಯ ಬಿಸಿ, ರೋಷಗಳು ಅವರ ಅನೇಕ ಕತೆಗಳ ದ್ರವ್ಯವಾಗಿದೆ.

೪) ಅ. ನ. ಕೃ. ಸಣ್ಣ ಕತೆಗಳ ಸೃಷ್ಟಿಗೆ ತೊಡಗಿದ ಸಂದರ್ಭ ಇದು. ಸಣ್ಣ ಕತೆಯ ರೂಪ ಮತ್ತು ಮಾಧ್ಯಮಗಳು ಒಂದು ನಿರ್ದಿಷ್ಟ ರಚನಾತ್ಮಕ ಸ್ವರೂಪ ಪಡೆಯುವಲ್ಲಿ ಮತ್ತು ಅದಕ್ಕೆ ಹೊಸ ಬದುಕಿನ ಹೋರಾಟದ ಆಯಾಮಗಳನ್ನು ಅಳವಡಿಸುವಲ್ಲಿ ಅ. ನ. ಕೃ. ಕತೆಗಳು ನಿರ್ವಹಿಸಿದ ಪಾತ್ರ ಗಣನೀಯವಾದದ್ದು. ೧೯೩೦ ರಿಂದ ೧೯೬೦ರ ವರೆಗೆ ಅವರ ಒಟ್ಟು ಎಂಟು ಕಥಾಸಂಕಲನಗಳು ಪ್ರಕಟವಾದುವು. ೧೯೩೦ರಲ್ಲಿ 'ಮಿಂಚು' ೧೯೩೧ ರಲ್ಲಿ 'ಕಿಡಿ' ೧೯೪೨ ರಲ್ಲಿ 'ಕಾಮನ ಸೋಲು' ೧೯೪೩ ರಲ್ಲಿ 'ಪಾಪ ಪುಣ್ಯ' ೧೯೪೫ ರಲ್ಲಿ 'ಕಣ್ಣು ಮುಚ್ಚಾಲೆ' ೧೯೪೭ ರಲ್ಲಿ 'ಅಗ್ನಿಕನ್ಯೆ' ೧೯೫೦ ರಲ್ಲಿ 'ಶಿಲ್ಪಿ' ೧೯೬೦ ರಲ್ಲಿ 'ಸಮರ ಸುಂದರಿ' ಇವುಗಳ ಮೂಲಕ ಅ. ನ. ಕೃ ಮಾನಸಿಕ ವಿಪ್ಲವದ, ಅಸ್ಪೃಶ್ಯೋದ್ಧಾರದ ಸಾಮಾಜಿಕ

ಕಳಕಳಿಯ, ರಾಜಕೀಯ ಧಾರ್ಮಿಕ, ರಾಷ್ಟ್ರೀಯ ದೃಷ್ಟಿಯ, ದಾಂಪತ್ಯ, ಲೈಂಗಿಕ-ವಿಷಮತೆ-ವಿಷಣ್ಣತೆಯ, ಆರ್ಥಿಕ ಶೋಷಣೆಯ, ಭಂಡವಳಶಾಹೀ ವ್ಯವಸ್ಥೆಯ ಪ್ರತಿಭಟನೆಯ ಅನೇಕ ವಸ್ತುಗಳನ್ನಾಧರಿಸಿದ ಒಂದು ದೊಡ್ಡ ಕಥಾ ಪ್ರಪಂಚವನ್ನೇ ನಿರ್ಮಿಸಿದರು. ತಮ್ಮ ಕತೆಗಳನ್ನು ಕುರಿತು ಅವರು ಒಂದೆಡೆ ಹೀಗೆ ಹೇಳುತ್ತಾರೆ. 'ದೀನರ ಆರ್ತರ ಅಂಡಲೆಗಳು ... ಇವುಗಳನ್ನು, ನಮ್ಮ ಸಮಾಜದಲ್ಲಿ ರಣಲೀಲೆಯನ್ನಾಡುತ್ತಿರುವ ಈ ಕಾರ್ಯದ ಬೇತಾಳ ಕೃತ್ಯವನ್ನು ನೋಡಿ ಬೆಂದ ನನ್ನ ಹೃದಯದ ಭಾವನೆಗಳನ್ನು ಕಥೆಗಳ ಮೂಲಕ ಹೊರಗೆಡವಿದ್ದೇನೆ. ದೀನರ ವಾಣಿ ನಾನಾಗಬೇಕೆಂದು ಈ ಕಥೆಗಳನ್ನು ಬರೆದಿದ್ದೇನೆ. ದುಃಖಿಸಿ ನನ್ನ ಆತ್ಮವು ಮುಂದೆ ಅಡಿ ಇಟ್ಟಿದೆ!.'[೬] ಅ.ನ.ಕೃ ಅವರ ಈ ಅಭಿಪ್ರಾಯ ಅವರ ಅನೇಕ ಕತೆಗಳ ಜೀವಾಳವಾಗಿದೆ.

೫) ಅ. ನ. ಕೃ. ಅವರ ಕಥೆಗಳನ್ನು ವಿವೇಚನೆಗೆ ಎತ್ತಿಕೊಳ್ಳುವ ಪೂರ್ವದಲ್ಲಿ ಕಥಾಕ್ಷೇತ್ರದ ಬಗೆಗಿನ ಅವರ ಆಸಕ್ತಿ ಮತ್ತು ಕಾರ್ಯ ಚಟುವಟಿಕೆಗಳನ್ನು ಗಮನಿಸುವುದು ಉಚಿತವಾಗಿದೆ.

೩೦ ರ ದಶಕದಲ್ಲಿ ಸಣ್ಣ ಕತೆಗಳಿಗೆ ಮೀಸಲಾದ 'ಕಥಾಂಜಲಿ' ಮಾಸ ಪತ್ರಿಕೆಯ ಸಂಪಾದಕರಾಗಿ ಕಾರ್ಯನಿರ್ವಹಿಸುತ್ತ ೧೯೩೩ ರಲ್ಲಿ ಅನೇಕ ಕತೆಗಾರರ ಉತ್ತಮ ಕತೆಗಳನ್ನು ಆರಿಸಿ 'ಕಾಮನಬಿಲ್ಲು' ಎನ್ನುವ ಒಂದು ಬೃಹತ್ ಕಥಾಸಂಕಲನ ಪ್ರಕಟಿಸಿದರು. ಬಹುಶಃ ಕನ್ನಡ ಕಥಾ ಸಾಹಿತ್ಯದ ವಿಕಾಸದ ದೃಷ್ಟಿಯಿಂದ ಇದೊಂದು ಮಹತ್ವದ ಘಟ್ಟ. ದೇಶದಲ್ಲಿ ಒಂದು ಕಡೆ ಸ್ವಾತಂತ್ರ್ಯದ ಹೋರಾಟ, ಇನ್ನೊಂದು ಕಡೆ ಆರ್ಥಿಕ ವಿಷಮತೆ, ಮತೀಯ ದ್ವೇಷ ಮಾತ್ಸರ್ಯಗಳಿಂದ ಬಳಲುವ ಜನ ಸಮೂಹ, ಮತ್ತೊಂದೆಡೆ ಕಮ್ಯುನಿಝಮ್ ಇತ್ಯಾದಿಗಳ ಉದ್ಘೋಷಗಳು. ಹೀಗೆ ಪ್ರಗತಿಶೀಲ ಸಾಹಿತ್ಯದ ಒತ್ತಾಸೆಯಾದ ಅನೇಕ ಒಲವುಗಳು ಅ.ನ.ಕೃ. ಅವರ ಕತೆಗಳಿಗೆ

೬. ದಲಿತರ. ಪು!! ೩೫೦ ಸಂ. ಡಾ. ಸುಂ. ಕೃಷ್ಣರಾಯ, ೧೯೭೦

ಪ್ರೇರಕಾಂಶಗಳಾದುವು. ವಸ್ತುವಿನ ಆಯ್ಕೆಯ ದೃಷ್ಟಿಯಿಂದ ಅ. ನ.ಕೃ. ಅವರು ಒಬ್ಬ ವಿರಳ ದೃಷ್ಟಿಯ ಕತೆಗಾರ. ಕೌಟುಂಬಿಕ ಸಾಮಾಜಿಕ ಬದುಕಿನ ಕೆಲವು ವಿಶಿಷ್ಟ ಸಂದರ್ಭಗಳಂತೂ ಸರಿಯೆ. ಆದರೆ ರಾಷ್ಟ್ರೀಯ ಜೀವನಕ್ಕೆ ಆಹ್ವಾನವಾದ ಹಿಂದೂ ಮುಸ್ಲಿಮ್ ಬಾಂಧವರ ಸೌಹಾರ್ದತೆ, ಜಾತೀಯ ಕಟ್ಟುಪಾಡುಗಳನ್ನು ಮೀರಿ ನಿಲ್ಲುವ ಮಾನವತಾವಾದಿ ವ್ಯಕ್ತಿಗಳು. ಹರಿಜನರ ಸಮಸ್ಯೆಯ ಗಂಗಸಕ್ಕೆ ಬಲಿಯಾಗುವ ಚಾರಿತ್ರಿಕ ಸಂದರ್ಭಗಳು ಇವರ ಕತೆಗಳ ಪಿಂಡವಾಗಿ, ಪ್ರಾಣವಾಗಿ ಮೂಡಿ ಬಂದಿರುವುದು ಕನ್ನಡ ಕತೆಗಳ ಬೆಳವಣಿಗೆಯ ದೃಷ್ಟಿಯಿಂದ ಉಲ್ಲೇಖನೀಯ ಸಂಗತಿ.

'ಜಗ್ಗು ಪಾಸು ಮಾಡಿದ್ದು' ನಮ್ಮ ಭ್ರಷ್ಟಗೊಂಡ ಶಿಕ್ಷಣ ಇಲಾಖೆಯ ಚಿತ್ರ. 'ಗೆದ್ದವರು ಯಾರು' 'ಕರೆಯುವ ಕಣ್ಣು' ಇತ್ಯಾದಿಗಳು ಸಂಸಾರದ ಅನೇಕೊನೆಯ ಸಂದರ್ಭಗಳು. 'ಮುಗಿಯದ ಕಥೆ' 'ಗಂಗವ್ವನ ಆಸೆ' 'ಸಮಾಗಮ' 'ದೊಡ್ಡ ಮನುಷ್ಯ' 'ವಿಷಕನ್ಯೆ' ಅತೃಪ್ತಕಾಮದಿಂದ ಕಾಮ ವಿಕೃತಿಯಿಂದ ಬಳಲುವ ಸಮಾಜದ ವಾಸ್ತವತೆಯ ಹಿನ್ನಲೆ. 'ಹಳದಿ ಬಾಗಿಲು' ಇತ್ಯಾದಿ ವೇಶ್ಯಾ ಸಮಸ್ಯೆಗೆ ಹಿಡಿದ ರಾವುಗನ್ನಡಿ. ಒಂದು ಸಂಜೆ, ಬೂಬಮ್ಮ, 'ಅಗ್ನಿಕನ್ಯೆ' 'ಕಾಲಕೂಟ' ನಮ್ಮ ಸಮ್ಮಿಶ್ರ ಸಾಂಸ್ಕೃತಿಕ ಸಂಘರ್ಷದ ಹಿನ್ನೆಲೆಯಲ್ಲಿ ಮೂಡಿ ಬಂದ ಜಾತೀಯ ಜಾತ್ಯಾತೀತ ಸಂವೇದನೆಗಳ ನೇರ ಚಿತ್ರಣಗಳು.

ಅ. ನ. ಕೃ. ಅವರ ಕಥೆಗಳಲ್ಲಿ ಮೇಲು ನೋಟಕ್ಕೆ ಎದ್ದುಕಾಣುವ ಒಂದು ವೈಶಿಷ್ಟ್ಯವೆಂದರೆ ಸಂಭಾಷಣೆ. ಅವರ ಯಾವುದೇ ಕಥೆಯ ವಸ್ತು ಪಾತ್ರ, ಮನೋಧರ್ಮಗಳು ಸಂಭಾಷಣೆಗಳ ಮೂಲಕ ಬಿಚ್ಚಿಕೊಳ್ಳುತ್ತ ಹೋಗುತ್ತವೆ.

ಅ. ನ. ಕೃ. ಅವರ ಕೆಲವು ಕತೆಗಳನ್ನು ನೇರವಾಗಿ ವಿವೇಚನೆಗೆ ಎತ್ತಿ ಕೊಂಡಾಗ ಈ ಮಾತಿನ ಸತ್ಯಾಂಶ ಗೋಚರಿಸುತ್ತದೆ.

೧) 'ಜಗ್ಗು ಪಾಸು ಮಾಡಿದ್ದು' ಮೇಲುನೋಟಕ್ಕೆ ಒಂದು ಸಾಮಾನ್ಯ ಕಥೆ ಎಂದು ತೋರಿದರೂ, ನಮ್ಮ ಶಿಕ್ಷಣ ಪ್ರಪಂಚ ಮತ್ತು

ನಮ್ಮ ವಿದ್ಯಾರ್ಥಿಗಳ ಮಾನಸಿಕ ಸ್ಥಿತಿಗತಿಗಳು ಪತನಗೊಂಡ ರೀತಿಯನ್ನು ಎತ್ತಿ ತೋರಿಸುವಲ್ಲಿ ಸಫಲವಾಗುತ್ತದೆ.

ತಿರುನಾರಾಯಣ ಅಯ್ಯಂಗಾರರ ಅತಿ ಮುದ್ದಿನ ಮಗ ಜಗನ್ನಾಥ. ತಂದೆ ಅಯ್ಯಂಗಾರರ ಪ್ರೀತಿಯಿಂದ ಮಗನನ್ನು 'ಜಗ್ಗು ಜಗ್ಗು' ಎಂದು ಕರೆಯುತ್ತಿರುತ್ತಾರೆ. ಈ ಮಗ ಯಾವುದಕ್ಕೂ ಜಗ್ಗುವದಿಲ್ಲ. ನಿಷ್ಠೆಯಿಂದ ಅಭ್ಯಾಸ ಮಾಡುವುದಂತೂ ಅವನಿಗೆ ಗೊತ್ತೇ ಇಲ್ಲ. ಇವನೊಬ್ಬ ಉಡಾಫೆ. ಮೇಲೆ ಹನುಮಂತದೇವರ ಭಕ್ತ. ಅವನ ಹೊರಗಿನ ಪುಂಡತನ ಅಂಡಲಿತನ ಹೆಚ್ಚುತ್ತಾ ಹೋದಂತೆ ಶಾಲೆಯಲ್ಲಿಯ ಅವನ ಅಭ್ಯಾಸ ಕುಗ್ಗುತ್ತದೆ. ಹಾಗೆ ನೋಡಿದರೆ ಅವನೇನೂ ದಡ್ಡನಲ್ಲ; ಆದರೆ ಓದುವುದು ಬರೆಯುವುದು ಇಂಥ ಶ್ರಮದ ಜುಜುಬಿ ಕೆಲಸ ಯಾರು ಮಾಡಬೇಕು? ತುಮಕೂರಿನ ಒಂದೆಡೆ ಕಂಡ 'ಖಾಂದಾರಿ' ಈರಾಣಿ ಅಲೆಮಾರಿ ತಂಡದ ಒಬ್ಬ ಹೆಂಗಸಿನಲ್ಲಿ ಹೊಳೆಯುವ ಚಾಕು ನೋಡುತ್ತಾನೆ ಜಗ್ಗು. ಅದನ್ನು ಪಡೆಯುವ ಆಶೆ. ತನಗೋ ಅವಳ ಭಾಷೆ ನಾಸ್ತಿ. ಕೈ ಬಾಯಿ ಸಂಜ್ಞೆಗಳ ಮೂಲಕ ಅದರ ಬೆಲೆ ನಾಲ್ಕು ರೂಪಾಯಿ ಎಂದು ತಿಳಿದ ಇವನು ತನ್ನ ಹತ್ತಿರ ಇದ್ದ ಜೇಪೆ ಹಣ್ಣಿನ ಆಸೆ ಅವಳಿಗೆ ಹಚ್ಚಿ ತನ್ನಲ್ಲಿದ್ದ ಎರಡು ರೂಪಾಯಿ ಜೋಡಿಸಿ ಆ ಖಾಂದಾರಿ ಹೆಣ್ಣಿಗೆ ಕೊಟ್ಟು ಅವಳಿಂದ ಚಾಕು ಪಡೆಯುವಲ್ಲಿ ಯಶಸ್ವಿಯಾಗುತ್ತಾನೆ. ಆಹಾ ಚಾಕು ಎಂಥದು! ನಾಲ್ಕು ಅಂಗುಲ ಉದ್ದ; ಅದರ ಅಲಗು ಮೂರುವರೆ ಅಂಗುಲ. ಹಿಡಿಕೆಯ ಬಾಮು ಗುಂಡಿ ಒತ್ತಿದರೆ ಚಟ್ ಎಂದು ಚಾಕು ನಾಲಗೆ ಚಾಚಿ ಲಕಲಕಿಸುತ್ತದೆ.

ಜಗ್ಗುವಿಗೆ ಗಣಿತ ಭೂಗೋಳ ತಲೆಯಲ್ಲಿ ಹೋಗಲಾರದ ವಿಷಯ. ತಂದೆ ಅಯ್ಯಂಗಾರರು ಒಬ್ಬ ಶಿಕ್ಷಕರನ್ನು ಗೊತ್ತುಮಾಡಿ ತಮ್ಮ ಮಗನಿಗೆ ವಿಶೇಷ ಪಾಠ ಹೇಳಿಸುತ್ತಾರೆ. ಏನು ಮಾಡಿದರೂ ಮೇಷ್ಟ್ರಿಗೆ ಪಾಠ ಮುಗಿಯಲಿಲ್ಲ, ಜಗ್ಗುಗೆ ಬರಲಿಲ್ಲ! ಪರೀಕ್ಷೆಯ ಕೋಣೆಯಲ್ಲಿ ಗಣಿತದ ಪ್ರಶ್ನೆ-ಪತ್ರಿಕೆ ಕೈಗೆ ಬಂದಾಗ ಜಗ್ಗುವಿಗೆ ಕಣ್ಣೀರು! ಬರೀ ಪತ್ರಿಕೆ ಕೊಟ್ಟು ಮನೆಗೆ ಬರುತ್ತಾನೆ. ಮನೆಗೆ ಬಂದಾಗ ತಂದೆ ಕೇಳುತ್ತಾನೆ:

‘ಹೇಗೆ ಮಾಡಿದ್ದೆ’

‘ಚೆನ್ನಾಗಿ ಮಾಡಿದ್ದೇನೆ’

‘ಪಾಸಾಗುತ್ತೊ?

‘ಆಗೇ ಆಗುತ್ತೆ’

‘ಕಳೆದ ವರ್ಷದ ಹಾಗೆ ಈ ವರ್ಷವೂ ಡುಮುಕಿ ಹೊಡೆದರೆ ಮನೆ ಬಿಟ್ಟು ಆಚೆ ಕಳಿಸುತ್ತೇನೆ. ಆಳ್ವರ ಕಾಲುಸಂದಿ ನುಸುಳು; ಆಗಲಾದರೂ ಬುದ್ಧಿ ಬರುತ್ತೆ’ ಮೊದಲೇ ಕಂಗಾಲಾದ ಜಗ್ಗು, ಪರೀಕ್ಷೆಯಲ್ಲಿ ತಾನು ನಪಾಸಾದ ಸುದ್ದಿ ಒಳಗಿಂದೊಳಗೇ ತಿಳಿದುಕೊಂಡು ಆಳ್ವರ ಮನೆಗೆ ಬರುತ್ತಾನೆ. ಅವರನ್ನು ಕಾಡಿ ಬೇಡಿ ಗಣಿತ ಮತ್ತು ಭೂಗೋಳ ಎರಡೂ ವಿಷಯಗಳ ಪ್ರಶ್ನೆಗೆ ಉತ್ತರ ಬರೆಯಿಸಿಕೊಳ್ಳುತ್ತಾನೆ. ಇನ್ನು ಮುಂದಿನ ಸಾಹಸಕಾರ್ಯ? ಆ ಉತ್ತರ ಪತ್ರಿಕೆಗಳನ್ನು ತೆಗೆದುಕೊಂಡು ಹೈಸ್ಕೂಲ ಗುಮಾಸ್ತನಾಗಿರುವ ತನ್ನ ಸೋದರ ಮಾವನಾದ ಶರಭೋಜನಲ್ಲಿಗೆ ಬರುತ್ತಾನೆ. ಅವನ ಮುಂದೆ ಗೋಗರೆದು, ಈ ಎರಡು ವಿಷಯಗಳಲ್ಲಿ ತಾನು ನಪಾಸಾದರೆ ತನಗೆ ಮನೆಯಲ್ಲಿ ಸ್ಥಾನವಿಲ್ಲ; ಉಳಿಗಾಲವಿಲ್ಲ; ಇತ್ಯಾದಿ ಹೇಳುತ್ತಾ ಹೇಗಾದರೂ ತನ್ನ ಖಾಲಿ ಉತ್ತರ ಪತ್ರಿಕೆಗಳ ಬದಲು ಬರೆದು ತಂದ ಉತ್ತರ ಪತ್ರಿಕೆ ಇಡಲು ಕೇಳಿಕೊಳ್ಳುತ್ತಾನೆ. ಶರಭೋಜ-ಪಾಪ ಭೀರು. ಒಪ್ಪುವದಿಲ್ಲ. ಜಗ್ಗು ಜಗ್ಗುತ್ತಾನೆಯೇ? ಛಕ್ ಎಂದು ಚಾಕು ಹಿರಿದು, ಶರಭೋಜನನ್ನು ಶಾಲೆಗೆ ಕರೆತಂದು, ಉತ್ತರ ಪತ್ರಿಕೆಗಳ ಕೋಣೆಯ ಬೀಗ ತೆರೆದು, ಅವನನ್ನು ಹುಷಾರಾಗಿ ಬಾಗಿಲು ಕಾಯುವಂತೆ ಎಚ್ಚರಿಸಿ, ತಾನು ಒಳಹೋಗಿ, ನಿಮಿಷಾರ್ಧದಲ್ಲಿ ತನ್ನ ಖಾಲಿ ಉತ್ತರ ಪತ್ರಿಕೆಯನ್ನು ಬದಲು ಮಾಡಿ, ಅದರ ಜಾಗೆಯಲ್ಲಿ ಬರೆದು ತಂದುದನ್ನು ಸೇರಿಸಿ ಮನೆಗೆ ಮರಳುತ್ತಾನೆ. ಅವನಿಗೆ ಒಳಗೊಳಗೇ ಖುಷಿ! ಯಥಾವತ್ತಾಗಿ ಪರೀಕ್ಷೆಯ ಫಲಿತಾಂಶ. ಜಗ್ಗು ಉತ್ತಮ ತರಗತಿಯಲ್ಲಿ ಯಶಸ್ವಿ.

ಜಗ್ಗೂನ ತಂದೆ ಹೇಳುತ್ತಾರೆ: ‘ಜಗ್ಗು ಬುದ್ಧಿವಂತ. ಕಷ್ಟಪಟ್ಟು ಓದಿದರೆ ಅವನು ಫೇಲಾಗೊಲ್ಲ’. ನಮ್ಮ ಪರೀಕ್ಷೆ, ಮೌಲ್ಯಮಾಪನ, ಅದರ ಹಿಂದಿನ ಕುತಂತ್ರ ಇತ್ಯಾದಿಗಳನ್ನು ಅ. ನ. ಕೃ. ತುಂಬ ಸೂಕ್ಷ್ಮ ಕಂಪನಿಯ ಮಾಲೀಕನ ಕಣ್ಣಿಗೆ, ಉಸ್ತಾನ ಒಬ್ಬ ಒಳ್ಳೆಯ ನಟನಾಗುವ

ವಾಗಿ ಗಮನಿಸಿದ್ದಾರೆ. ನಮ್ಮ ಸಾರ್ವಜನಿಕ ಬದುಕಿನ ಒಂದು ಮುಖ್ಯ ಅಂಗವಾಗಿರುವ ಶಿಕ್ಷಣ ಒಂದು ಕುತಂತ್ರಗಳ ಜಾಲವಾಗಿರುವುದನ್ನು ಈ ಮೂಲಕ ಗ್ರಹಿಸಿದ ಅ. ನ. ಕೃ. ಇಂಥ ಪತನಕ್ಕೆ ಕಾರಣವಾಗಿರುವ ಸಾವಿರಾರು ಜಗ್ಗು, ಕರಭೋಜ ಇತ್ಯಾದಿ ಜನರನ್ನು ಬಯಲಿಗೆಳೆಯುತ್ತಾರೆ. ಇಂಥ ಪರಸ್ಥಿತಿಗಳ ಬೇರಿಗೆ ನಮ್ಮನ್ನು ಕೊಂಡೊಯ್ಯುತ್ತಾರೆ. ವಸ್ತು ಸಾಮಾನ್ಯವೆಂದು ತೋರಿಬಂದರೂ, ಶೈಲಿ, ನಿರೂಪಣಾ ವಿಧಾನ, ಹಾಗೂ ಪರಿಣಾಮಗಳ ಮೂಲಕ ಕಥನ ರಚನೆಗೆ ಒಂದು ಹೊಸ ತಿರುವು ಬಂದಿತೆನ್ನುವುದು ಕಥಾ ಸಾಹಿತ್ಯದ ಬೆಳವಣಿಗೆಯ ದೃಷ್ಟಿಯಿಂದ ಮಹತ್ವದ್ದಾಗಿದೆ. 'ಕರುಳಿನ ಕೂಗು' 'ರಾಮೋತ್ಸವ' 'ಸುಂಕಕ್ಕೆ ಸುಂಕ' ಇತ್ಯಾದಿ ಕಥೆಗಳು ಅ. ನ. ಕೃ. ಅವರ ವಿಶೇಷ ಆಸಕ್ತಿಗೆ ಕಾರಣವಾದ ಕಲಾಪ್ರಪಂಚಕ್ಕೆ, ಕಲಾವಿದರ ಸಾಮಾನ್ಯ ವ್ಯಕ್ತಿಗಳ ಆಶೆ ಆಕಾಂಕ್ಷೆ, ಸೋಲುಗೆಲವುಗಳಿಗೆ ಸಂಬಂಧಿಸಿದ ಬದುಕನ್ನು ಒಳಹೊಕ್ಕು ನೋಡುವ ಕಥೆಗಳಾಗಿವೆ.

೭) 'ಕರುಳಿನ ಕೂಗು' ಒಬ್ಬ ಸಾಮಾನ್ಯ- ಭಿಕ್ಷಾವೃತ್ತಿಯಿಂದ ಜೀವಿಸುತ್ತಿದ್ದ-ವ್ಯಕ್ತಿ ಮಹಮ್ಮದನ ಹೃದಯದ ಹಂಬಲಗಳನ್ನು ಎತ್ತಿ ತೋರಿಸುತ್ತದೆ. ವೃದ್ಧ ಮಹಮ್ಮದ ಭಿಕ್ಷುಕ. ತನ್ನ ಮಗ ಉಸ್ಮಾನ್ ತನ್ನಂತೆ ಭಿಕಾರಿಯಾಗಿ ಜೀವಿಸಕೂಡದು. ತಾನೇನೋ ಕಬೀರ, ಮೀರಾ, ಪುರಂದರ ದಾಸ ಮುಂತಾದವರ ಹಾಡುಗಳನ್ನು ಹೇಳುತ್ತಾನೆ; ಜನ ಕೊಡುತ್ತಾರೆ. ಅಥವಾ ಅವರು ಕೂಡಿದ ಚೌಕದಲ್ಲಿ ತಾನು ಹಾಡುತ್ತಾನೆ. ಅದರಿಂದ ಖುಷಿ ಪಟ್ಟ ಜನ ಏನೋ ಒಂದಷ್ಟು ಕೊಡುತ್ತಾರೆ. ಅದರಿಂದ ಹೇಗೋ ಹೇಗೋ ತನ್ನ ಸಂಸಾರ ಸಾಗುತ್ತದೆ. ಒಮ್ಮೊಮ್ಮೆ ಒಂದೊತ್ತು ಎರಡೊತ್ತು ಉಪವಾಸವೂ ಉಂಟು. ತನ್ನ ಮಗನ ಬದುಕು ಇಂಥ ಗತಿಗೆಟ್ಟ ರೀತಿಯಲ್ಲಿ ಸಾಗಕೂಡದು. ಅವನೊಬ್ಬ ಒಳ್ಳೆಯ ಕಲಾವಿದನಾಗಬೇಕು. ಅಲ್ಲಾನ ಕೃಪೆಯಿಂದ ಮಗ ಉಸ್ಮಾನನಿಗೆ, ದೈವದತ್ತವಾದ ಒಳ್ಳೆಯ ಕಂಠವೂ ಇದೆ. ಈ ಭಾವನೆಗಳಿಗೆ ಪೋಷಕವಾಗುವಂತೆ ಉಸ್ಮಾನನನ್ನು ಮಹಮ್ಮದ ಬೆಳೆಸುತ್ತಾನೆ. ತನಗೆ ಬರುವ ಎಲ್ಲ ಹಾಡುಗಳನ್ನು ಅವನಿಗೆ ಕಲಿಸುತ್ತಾನೆ. ತಂದೆಯ ಈ ಆಕಾಂಕ್ಷೆಗಳಲ್ಲಿ ಬೆಳೆದ ಉಸ್ಮಾನ್, ಒಳ್ಳೆಯ ಮೈಕಟ್ಟಿನ ಉತ್ತಮ ಹಾಡುಗಾರನಾಗಿ ಬೆಳೆಯುತ್ತಾನೆ. ಕಲ್ಕತ್ತಾದ ಪಾರ್ಸಿನಾಟಕ

ಸಾಮರ್ಥ್ಯವುಳ್ಳವನಾಗಿ ತೋರುತ್ತಾನೆ. ಅವರ ಆಹ್ವಾನದ ಮೇರೆಗೆ ನಾಟಕ ಕಂಪನಿಯನ್ನು ಸೇರುತ್ತಾನೆ. ತಿಂಗಳಿಗೆ ಐವತ್ತು ರೂಪಾಯಿ ಸಂಬಳ. ವೃದ್ಧ ಮಹಮ್ಮದನಿಗೆ ಎಲ್ಲಿಲ್ಲದ ಖುಷಿ! ತನ್ನ ಮಗ ದೊಡ್ಡ ಗವಾಯಿ ಮತ್ತು ಉತ್ತಮ ನಟನಾಗುತ್ತಾನೆ. ತನ್ನದೇನು? ಹೇಗೋ ನಡೆಯುತ್ತದೆ. ನಾಳೆ ತನ್ನ ಮಗ ಕಲಾವಿದನಾಗಿ ಗೌರವದ ಬದುಕನ್ನು ಸಾಗಿಸುತ್ತಾನಲ್ಲ! ಅಂತೂ ಉಸ್ಮಾನ್ ನಾಟಕಕಂಪನಿ ಸೇರುತ್ತಾನೆ. ಪ್ರತಿ ತಿಂಗಳೂ ತಂದೆಯ ಖರ್ಚಿಗೆ ಅಷ್ಟು ಹಣ ಕಳಿಸುವುದಾಗಿ ಭರವಸೆಯನ್ನು ಕೊಡುತ್ತಾನೆ. ಮಗನನ್ನು ಬಿಟ್ಟಿರುವುದು ತನಗೆ ದುಃಖದಾಯಕವಾದರೂ ಅವನ ಜೀವನದ ಏಳಿಗೆ–ಕಲಾವಿದನಾಗುವ ಕನಸು–ಎಲ್ಲ ಕೂಡಿಬರುತ್ತದೆ ಎಂದೆಲ್ಲ ಯೋಚಿಸಿದ ಮಹಮ್ಮದ ತನ್ನ ಕೊರಗನ್ನು ಬಚ್ಚಿಟ್ಟು, ಮಗನನ್ನು ಕಳಿಸುತ್ತಾನೆ. ನಾಲ್ಕಾರು ವರ್ಷ ಗತಿಸುತ್ತವೆ. ನಾಟಕ ಕಂಪನಿಯಲ್ಲಿ ದಿನೇ ದಿನೇ ಅಭಿವೃದ್ಧಿ ಸಾಧಿಸಿದ ಉಸ್ಮಾನ್, ಶ್ರೇಷ್ಠ ನಟ ಹಾಗೂ ಉತ್ತಮ ಗವಾಯಿ ಎಂದು ಕೀರ್ತಿಗಳಿಸಿ 'ಉಸ್ಮಾನ್‌ಖಾನ್' ಆಗುತ್ತಾನೆ. ಈಗ ಉಸ್ಮಾನ್ ಖಾನನಿಗೆ ತಂದೆಯ ನೆನಪೇ ಉಳಿದಿಲ್ಲ. ತಂದೆಯ ಪ್ರೀತಿ ವಾತ್ಸಲ್ಯ, ಕಷ್ಟ, ಕಳಕಳಿ, ಹಂಬಲು ಯಾವುದೂ ಉಸ್ಮಾನ್ ಖಾನನ ಮನಸ್ಸಿನಲ್ಲಿ ಉಳಿಯುವುದಿಲ್ಲ. ದಿನಗಳೆದಂತೆ ಉಸ್ಮಾನ, ಫಾರ್ಸೀ ನಾಟಕಕಂಪನಿಯ ಒಡೆಯನಾಗುತ್ತಾನೆ. ತನ್ನ ಕಂಪನಿಯಲ್ಲಿ ನಟಿಯಾಗಿದ್ದ ಪ್ಯಾರಿ, ಅವನ ಮೈ ಮನಸ್ಸುಗಳನ್ನು ಸೆರೆಹಿಡಿಯುತ್ತಾಳೆ. ಅವಳ ಕಣ್ಣು ವಿಶಾಲ, ಚಂಚಲ! ಬೆಳ್ಳಗೆ ಬೆಳ್ಳಗಿರುವ ನಯನಾಜೂಕಿನ ಯುವತಿ. ಆದರೆ ಕ್ಷಣ ಕ್ಷಣಕ್ಕೆ ಮನಸ್ಸು ಬದಲಿಸುವ ಪಾತರಗಿತ್ತಿಯ ಪ್ರವೃತ್ತಿ. ಇತರರು ಪ್ಯಾರಿಯನ್ನು ಕಂಪನಿಯಲ್ಲಿ ಸೇರಿಸಿಕೊಳ್ಳುವುದು ಬೇಡವೆಂದು ಹೇಳಿದರೂ ಕೇಳದ ಉಸ್ಮಾನ್‌ಖಾನ್, ಅವಳಿಗೆ ಹೆಚ್ಚಿನ ಸ್ಥಾನ ಕೊಡುತ್ತಾನೆ. ಅವಳ ಜೊತೆ ಪ್ರಣಯ ವ್ಯವಹಾರ ಕುದುರುತ್ತದೆ. ಲೈಲಾಮಜನೂ ನಾಟಕದಲ್ಲಿ ಪ್ಯಾರಿ ಲೈಲಾ, ಶಿರೀನ್ ಫರಹಾದದಲ್ಲಿ ಅವಳು ಶಿರೀನ್ ಸುಲೇಮಾನ್'ದಲ್ಲಿ, ಜುಲೇಖಾ, ಶಾಕುಂತಲದಲ್ಲಿ ಶಕುಂತಲಾ; ಹೀಗೆ ಅವಳಿಗೆ ದಿನಕ್ಕೊಂದು ಚೆಂದದಂತೆ ನಾಟಕಗಳಲ್ಲಿ ಸಿಂಗರಿಸಿ, ಅಲಂಕರಿಸಿ ತನ್ನ ಪ್ರಣಯಾರಾಧನೆಗೆ ಕುಮ್ಮಕ್ಕು ಕೊಡುತ್ತಾನೆ. ಉಸ್ಮಾನ್‌ಖಾನನಿಗೆ ಪ್ಯಾರಿಯಿಂದಾಗಿ ಸ್ವರ್ಗ ಮೂರೇ ಬೆರಳು. ಉಸ್ಮಾನ್

ಖಾನನ ಜೀವನವಲ್ಲಿ ಪ್ಯಾರಿಯ ಪ್ರಭಾವ ಬೆಳೆದಷ್ಟು, ಉಸ್ಮಾನ್‌ನ ನಟನಾ ಸಾಮರ್ಥ್ಯ ಮಧುರ ಕಂಠದ ಮೋಡಿ ಕುಗ್ಗುತ್ತದೆ. ಅವಳ ಹಂಬಲವೇ ಅಧಿಕವಾದ ಇವನು ರಂಗದ ಮೇಲೆ ಅಭಿನಯಿಸುವಾಗ, ಹಾಡಿನ ತಾನ ಗಳನ್ನು ಎತ್ತಿಕೊಳ್ಳುವಾಗ ಎಡವುತ್ತಾನೆ; ಆದರ ಕಲಾತ್ಮಕ ಹಿರಿಮೆಯನ್ನು ಕಡೆಗಣಿಸುತ್ತಾನೆ. ಕಂಪನಿಯ ಸಹನಟರಲ್ಲಿ ಉಸ್ಮಾನನ ಬಗೆಗೆ ಗೌರವ ಮರೆಯಾಗಿ ದ್ವೇಷ ಅಸೂಯೆಗಳ ಹೊಗೆಯಾಡುತ್ತದೆ. ಉಸ್ಮಾನನಿಗೆ ದಿನೇ ದಿನೇ ಅಪಖ್ಯಾತಿ.

ಇತ್ತ ಅವನ ತಂದೆ ಮಹಮ್ಮದ ಮಗನ ಹಂಬಲದಲ್ಲಿಯೇ ಕೊರುಗು-ತ್ತಾನೆ. ಮಗ ಕಳಿಸಿಕೊಟ್ಟ ಅಲ್ಪಸ್ವಲ್ಪ ಹಣ ಕೂಡಿಸಿಟ್ಟು ಮಗನ ಮದುವೆಯ, ಮುಂದೆ ಬರುವ ತನ್ನ ಸೊಸೆಯ—ಮಗಸೊಸೆಯರ—ಸುಂದರ ಜೀವನದ ಕಲ್ಪನೆಗಳಲ್ಲಿಯೇ ಕಾಲ ಕಳೆಯುತ್ತ ಬೇರೆ ಬೇರೆ ಹಾಡುಗಳನ್ನು ರಾಗಲಯಗಳನ್ನು ಮಗನಿಗೆ ಕಲಿಸಿ, ಅವನಿಗೆ ಇನ್ನೂ ಹೆಚ್ಚಿನ ಕೀರ್ತಿ ಬರು ವಂತೆ ಮಾಡಬೇಕು, ಎಂದು ಮುಂತಾಗಿ ಕನಸು ಕಟ್ಟುತ್ತಾನೆ. ಮಗ ಉಸ್ಮಾನ ಅಭಿನಯಿಸಿದ ನಾಟಕದ ಫೋಟೋಗಳನ್ನು ಪ್ರಾಣಕ್ಕಿಂತ ಹೆಚ್ಚಾಗಿ ಜತನದಿಂದಿರಿಸಿಕೊಂಡು, ನೋಡಿ ನೋಡಿ ಹೆಮ್ಮೆಯಿಂದ ಬೀಗುತ್ತಾನೆ. ಆದರೆ ಇತ್ತೀಚೆಗೆ ಉಸ್ಮಾನ್‌ನಿಂದ ಪತ್ರಗಳೇ ಇಲ್ಲ. ಅವನಿಂದ ಹಣದ ಮಾತಂತೂ ದೂರ ಉಳಿಯಿತು. ಈಗ ಅವನು ಮೊದಲಿನ ಸಾಮಾನ್ಯ ನಟನಲ್ಲ; ಉತ್ತಮ ದರ್ಜೆಯ ನಟನಾಚತುರ ಮತ್ತು ಪ್ರಸಿದ್ಧ ಗಾಯಕ. ಹಾಗಾದರೆ ತನ್ನನ್ನು ಮರೆತನೇ! ನಾನೇ ಯಾಕೆ ಅವನಲ್ಲಿಗೆ ಹೋಗಿ ನೋಡಬಾರದು? "ಹಿರಿಯ ಸ್ಥಾನದಲ್ಲಿರುವ ಆತ, ಕಿರಿಯ ಸ್ಥಾನದಲ್ಲಿರುವ ನಿರ್ಗತಿಕನಾದ ನನ್ನನ್ನು ಗುರ್ತಿಸಬಲ್ಲನೇ" ಛೀ. ಇದೆಲ್ಲ ನನ್ನ ಹುಚ್ಚು ಕಲ್ಪನೆ! ಅವನು ನನ್ನ ಮಗ! ನನ್ನ ಕರಳು! ಕಂಪನಿಯ ಮಾಲಿಕರಿಗೆ ತಾನು ಬರೆದ ಪತ್ರಕ್ಕೂ ಉತ್ತರವಿಲ್ಲ. ಕಳವಳಕ್ಕೀಡಾದ ಮಹಮ್ಮದ, ಹಾಗೂ ಹೀಗೂ ಒಂದುನೂರು ರೂಪಾಯಿ ಕೂಡಿಸಿಟ್ಟುಕೊಂಡು, ಕಲ್ಕತ್ತಾ ನಗರಕ್ಕೆ ಹೋಗುತ್ತಾನೆ. ಬಹಳ ಕಷ್ಟಪಟ್ಟು ನಾಟಕಕಂಪನಿಯ ಸ್ಥಳ ಪತ್ತೆ ಮಾಡು ತ್ತಾನೆ. ಇವನು ಕಂಪನಿಗೆ ಹೋಗುವುದಕ್ಕೂ ಮಗ ಉಸ್ಮಾನ್ ಕಾರಿನಲ್ಲಿ ಕೂತು ರೈಲ್ವೆ ನಿಲ್ದಾಣಕ್ಕೆ ಹೋಗುವುದಕ್ಕೂ ಸರಿಯಾಗುತ್ತದೆ. ನಾಟಕ

ಕಂಪನಿಯ ಆಳು ಇದೀಗ ಹೋದ ಕಾರಿನಲ್ಲಿಯೇ ಉಸ್ತಾದ್ ಖಾನರು ಹೋದದ್ದು ಎಂದು ತಿಳಿಸುತ್ತಾನೆ. ನೋಡುನೋಡುತ್ತಿದಂತೆ ಹೋದ ಕಾರನ್ನು ಬೆಂಬತ್ತಿ ರೈಲ್ವೆ ಸ್ಟೇಶನ್‌ಗೆ ಓಡುತ್ತಾನೆ. ಇವನು ಹೋಗುವಷ್ಟರಲ್ಲಿ ಉಸ್ತಾದ ಕೂತ ದಿಲ್ಲಿಯ ರೈಲು ಕಲ್ಕತ್ತಾ ನಿಲ್ದಾಣದಿಂದ ಚಲಿಸಿ ಬಿಟ್ಟಿರುತ್ತದೆ. ಮಗನನ್ನು ಕಾಣುವುದು ಸಾಧ್ಯವಾಗಲಿಲ್ಲವೇ ಎಂದು ಹತಾಶನಾದ ಮಹಮ್ಮದ ಅಲ್ಲಿಯೇ ಕುಸಿದು ಬೀಳುತ್ತಾನೆ. ಹಾಗೂ ಹೀಗೂ ತನ್ನ ಊರಿಗೆ ಮರಳುತ್ತಾನೆ. ಮಗನ ಕೊರಗಿನಿಂದ ಬಳಲಿದ ಇವನಿಗೆ ಹಾಸಿಗೆಯೇ ಗತಿ. ಅಕ್ಕಪಕ್ಕದ ಪರಿಚಯಸ್ಥರು ಇವನ ಮೇಲೆ ದಯೆ ತೋರಿ ಉಪಚರಿಸುತ್ತಾರೆ.

ಉಸ್ತಾದ್ ದಿಲ್ಲಿಯಿಂದ ಮರಳಿ ಕಲ್ಕತ್ತಾ ನಗರಕ್ಕೆ ಬರುತ್ತಾನೆ. ಅವನ ವ್ಯವಹಾರಗಳಿಂದಾಗಿ ಕಂಪನಿ ಹಾಳಾಗುತ್ತದೆ. ಇವನು ನೆಚ್ಚಿದ ಪ್ಯಾರಿ ಈ ಕಂಪನಿ ಬಿಟ್ಟು ಬೇರೆ ಕಂಪನಿ ಸೇರುತ್ತಾಳೆ. ಅವಳ ಮೋಹದಲ್ಲಿ ಅಂಧನಾಗಿದ್ದ ಉಸ್ತಾದ್ ಈಗ ಕಣ್ಣು ತೆರೆಯುತ್ತಾನೆ. ತನ್ನ ಎಲ್ಲ ಗಳಿಕೆಯನ್ನೂ ಅವಳಿಗಾಗಿಯೇ ಹಾಳು ಮಾಡಿಕೊಂಡಿದ್ದಕ್ಕಾಗಿ ದುಃಖಿಸುತ್ತಾನೆ. ಭಿಕಾರಿಯಂತಾಗುತ್ತಾನೆ. ಜೊತೆಗೆ ಇಲ್ಲದ ರೋಗಗಳೂ ಅಂಟಿಕೊಳ್ಳುತ್ತವೆ. ಈಗ ಉಸ್ತಾದ್ ಸಣ್ಣ ಪುಟ್ಟ ನಾಟಕ ಕಂಪನಿಗಳಲ್ಲಿ ಅಭಿನಯಿಸಿ ಸಿಕ್ಕಸಿಕ್ಕ ಹೆಣ್ಣುಗಳ ಸಹವಾಸ ಬೆಳೆಸುತ್ತಾನೆ. ಹಣವಂತೂ ಮೊದಲೇ ಇಲ್ಲ. ರೋಗಗಳ ದಾಳಿ ಬೇರೆ. ಆಸ್ಪತ್ರೆ ಸೇರಿ ಉಪಚಾರ ಹೊಂದುತ್ತಾನೆ. ಆಸ್ಪತ್ರೆಯಿಂದ ಬಿಡುಗಡೆ ಪಡೆದು ಬರುವ ಕ್ಷಣದಲ್ಲಿ, ಹಠಾತ್ತನೆ ತನ್ನ ತಂದೆಯ ನೆನಪು ಮರುಕಳಿಸುತ್ತದೆ. ಅಲ್ಲಿಂದ ನೇರವಾಗಿ ತನ್ನ ಊರಿಗೆ ಹೊರಡುತ್ತಾನೆ.

ಮಹಮ್ಮದನ ಕಾಯಿಲೆ ಉಲ್ಬಣಿಸಿರುತ್ತದೆ. ತನ್ನನ್ನು ನೋಡಿಕೊಳ್ಳುವ ವೈದ್ಯರ ಮುಂದೆ ತನ್ನ ಮಗ ಈ ದಿನ ಬಂದೇ ಬರುತ್ತಾನೆ. ಇತ್ಯಾದಿ ಬಡಬಡಿಸುತ್ತಾನೆ. ಅಂತೂ ಅಂದೇ ಉಸ್ತಾದ್ ತಂದೆಯಿದ್ದಲ್ಲಿಗೆ ಬರುತ್ತಾನೆ. ಮಗನನ್ನು ಕಂಡ ಮಹಮ್ಮದನಿಗೆ ಸಂತೋಷದ ಅತಿರೇಕ. ಸಂತೋಷದಲ್ಲಿಯೇ ಅವನ ಸಾವು! ಇದೇ 'ಕರುಳಿನ ಕರೆ'! ರಂಗಭೂಮಿ. ನಟನಟಿ

ಯರು, ಅವರ ದೌರ್ಬಲ್ಯಗಳು, ನಾಟಕ ಕಂಪನಿಯ ಬದುಕಿನ ಒಳನೋಟ ಎಲ್ಲ ವಾಸ್ತವಾಂಶಗಳನ್ನು ತಂಪಿಯೊಬ್ಬನ ಹಂಬಲಗಳ ಹಂದರದ ಮೇಲೆ ಚಿತ್ರಿಸುವ ಈ ಕಥೆ, ನಿಜ ಜೀವನದ ಸಾಫಲ್ಯ ವೈಫಲ್ಯಗಳ ಒಂದು ದಾರುಣ ನಿರೂಪಣೆ.

೫) ಅನೇಕ ಕತೆಗಾರರಿಗೆ ಸವಾಲಾಗಿರುವ ಮತ್ತು ನಮ್ಮ ಸಾಮಾಜಿಕ ಜೀವನದ ಒಂದು ಕೊನೆಯುಳ್ಳದ ಪ್ರಶ್ನೆಯಾಗಿರುವ, ವೇಶ್ಯಾ ಸಮಸ್ಯೆ ಅ. ನ. ಕೃ. ತಮ್ಮ ಕತೆಗಳಲ್ಲಿ ಒಡಮೂಡಿಸುವ ಮತ್ತೊಂದು ಮಹತ್ವದ ವಸ್ತು. 'ಜ್ವಾಲೆ' 'ಅವಳ ಬಾಳು' 'ಹಳದಿಯ ಬಾಗಿಲು' ಇತ್ಯಾದಿ ಕತೆಗಳು ಈ ಸಮಸ್ಯೆಗೆ ಕಾರಣವಾದ ಅನೇಕ ಅಂಶಗಳನ್ನು ಬಿಂಬಿ ತೋರಿಸುವ ಯತ್ನಗಳಾಗಿವೆ. ತನ್ನ ದ್ವೇಷಸಾಧನೆಗಾಗಿ ಒಂದು ಹೆಣ್ಣಿನ ಸುಂದರ ಬದುಕನ್ನು ಮಣ್ಣುಗೂಡಿಸುವ ಭೈರಪ್ಪ, ಆಸೆ ಆಮಿಷಗಳಿಗೆ ಬಲಿಯಾದ ಗಂಡನ ಜುಲುಮೆಗೆ ಮಣಿದು, ಸೂಳೆಗೇರಿ ಸೇರುವ ಕಮಲಾ, ತನ್ನ ವ್ಯಾಪಾರಿ ಮಗನನ್ನು ಬೆಳೆಸಿ ಹಣಗಳಿಸಿ, ಮಗನಿಂದಲೇ ತಿರಸ್ಕೃತಳಾಗುವ ಭಿಕ್ಷುಕಿ ಗಂಗಮ್ಮ, ಹೀಗೆ ಹಲವಾರು ಪತಿತ ಹೆಣ್ಣುಗಳು.

'ಹಳದಿಬಾಗಿಲು' ಕಥೆ ಮಾತ್ರ ಅ. ನ. ಕೃ. ಅವರ ಈ ನಿಟ್ಟಿನ ಒಂದು ಯಶಸ್ವೀ ಚಿತ್ರಣ. ನಾಗಾಸಾನಿ ಒಬ್ಬ ವೇಶ್ಯೆ. ಸಮಾಜದ ಎಲ್ಲ ಸ್ತರದ ಜನರೂ ಅವಳಸೆರಗಿನಲ್ಲಿ ಬೀಳುತ್ತಾರೆ. ಪ್ರತಿಷ್ಠಿತರೆನಿಸಿಕೊಳ್ಳುವವರು ಕತ್ತಲ ಮುಸುಕಿನಲ್ಲಿ ನಾಗಾಸಾನಿಯ ಎದುರು ಬೆತ್ತಲಾಗಿ, ಹಗಲು ಮಾತ್ರ ದೊಡ್ಡಸ್ತಿಕೆಯ ಸೋಗುಹಾಕಿ ಮೆರೆಯುತ್ತಾರೆ. ನಾಗಾಸಾನಿ ಮಾತ್ರ ನಿರಾಳ. ತನ್ನ ಜೀವನ ಕ್ರಮವನ್ನು ಒಪ್ಪಿಕೊಂಡ ಒಬ್ಬ ಸಹಜ ಸ್ವಭಾವದ ಪತಿತ ಹೆಣ್ಣು. ಒಂದು ದಿನ ಆರೋಗ್ಯಖಾತೆಯ ಜನ, ಬೀದಿಯ ನಾಯಿಯೊಂದನ್ನು ಸೆರೆಹಿಡಿದು ಒಯ್ಯುತ್ತಿರುತ್ತಾರೆ. ನಾಯಿಯ ಆರ್ತನಾದ, ನಾಗಾಸಾನಿಯ ಕಿವಿಗೆ ಬೀಳುತ್ತದೆ. ಅ. ನ. ಕೃ. ಮಾತುಗಳಲ್ಲಿಯೇ ಕೇಳಿ– "ಆರ್ತನೋಟ ಎಂಥವರ ಹೃದಯವನ್ನಾದರೂ ಕರಗಿಸುತ್ತಿತ್ತು. ಒಮ್ಮೆ ಕತ್ತು ಬಗ್ಗಿಸಿ ಕಂಬನಿಗರೆಯುವುದು, ಒಮ್ಮೊಮ್ಮೆ ಕತ್ತೆತ್ತಿ ಭೀಕರಧ್ವನಿಯಲ್ಲಿ ಕೂಗುವುದು. ಬೀದಿಯಲ್ಲಿ ಹೋಗುತ್ತಿದ್ದವರನ್ನೆಲ್ಲ ಒಂದೇಸವನೆ ಕರೆದು ಕರೆದು ಮಾತನಾಡಿಸುವಂತೆ ನೋಡಿನೋಡಿ ಕಣ್ಣೀರಿಡುವುದು……"

ಇದನ್ನು ನೋಡಿದ ನಾಗಸಾನಿಯ ಹೃದಯ ತಲ್ಲಣಿಸುತ್ತದೆ. ನಾಯಿಯ ಮೇಲೆ ಅವಳಿಗೆ ಅಪಾರ ಅನುರಾಗ, ಕರುಣೆ! ಅದನ್ನು ತಂದು ಸಾಕುತ್ತಾಳೆ. ವೇಶ್ಯಾವೃತ್ತಿಯ ವಿಲಾಸದ ಬದುಕಿನ ನಡುವೆ, ನಾಯಿಗೂ ಪಾಲು. ಬೀದಿಯ ದುರ್ಗತಿ ತಪ್ಪಿದ ನಾಯಿ, ನಾಗಸಾನಿಯ ಕರುಣೆಯಿಂದ ಮರುಹುಟ್ಟು ಪಡೆಯುತ್ತದೆ. ತನ್ನ ಒಡತಿಯ ಮೇಲೆ ಅದಕ್ಕೆ ಎಲ್ಲಿಲ್ಲದ ವಿಶ್ವಾಸ ಪ್ರೀತಿ. ನಾಗಸಾನಿಯ ದೈಹಿಕ ವಿಲಾಸದ ಜೀವನ, ಅವಳ ವಯಸ್ಸು ಇಳಿದಂತೆಲ್ಲಾ ಕರಗುತ್ತಾ ಹೋಗುತ್ತದೆ. ಬದುಕುತ್ತಾ ನಿರ್ಗತಿಕಳಾಗಿ ಬಳಲಿ ಸಾಯುತ್ತಾಳೆ. ಅವಳ ಮನೆಯ ಹತ್ತಿರ ಕೂಡ ಯಾರೂ ಸುಳಿಯುವದಿಲ್ಲ. ನಾಗಸಾನಿಯ ಶವದ ಹತ್ತಿರವೇ ಕುಳಿತ ನಾಯಿ ಮೂಕ ಯಾತನೆಯಿಂದ ಕಣ್ಣೀರು ಸುರಿಸುತ್ತದೆ. ಆರೋಗ್ಯ ಖಾತೆಯ ಜನ ಬಂದು ತಮ್ಮ ಗಾಡಿಯಲ್ಲಿ ದಿಕ್ಕಿಲ್ಲದ ನಾಗಸಾನಿಯ ಶವ ಹೇರಿಕೊಂಡು ಹೋಗುತ್ತಾರೆ. ಗಾಡಿಯಲ್ಲಿ ಶವ ಮುಂದೆ ಮುಂದೆ; ನಾಗಸಾನಿಯ ನಾಯಿ ಹಿಂದೆಹಿಂದೆ.

ಈ ಕಥೆಯ ಅಂತ್ಯ ಅ. ನ. ಕೃ. ಅವರ ಕಲಾತ್ಮಕ ಸೃಷ್ಟಿ ಮತ್ತು ವಾಸ್ತವ ಪ್ರಜ್ಞೆಗಳ ಸಂಯೋಜಕ ದೃಷ್ಟಿಗೆ ಸಾಕ್ಷಿ.

ಮಾರನೆಯದಿನ ಬೆಳಗ್ಗೆ ಬೀದಿ ಕಸಗುಡಿಸುವವನು ನಾಗಸಾನಿ ಮಲಗುತ್ತಿದ್ದ ಜಗಲಿಯ ಮೇಲೆ, ಒಂದು ನಾಯಿಮರಿ ಬಿದ್ದಿದ್ದನ್ನು ಕಂಡ. ಕೆಮ್ಮನಾತ ಹತ್ತಿರಹೋಗಿ ನೋಡಿದ ಅದು ಸತ್ತು ಹೋಗಿತ್ತು. 'ಸೂಳೆ ನಾಯಿ ಅವಳ ಜೊತೆಯಲ್ಲೇ ಹೋಯಿತು' ಎಂದುಕೊಂಡು ಕಸದ ಗಾಡಿಗೆ ಅದರ ಕಳೇಬರವನ್ನು ಸೇರಿಸಿದ."

ಪತಿತಗೊಂಡ ನಮ್ಮ ಸಾಮಾಜಿಕ ಪರಿಸರದಲ್ಲಿ ಮಾನವೀಯ ಅಂತಃಕರಣ ಮೂಕರೋದನವಾಗಿರುವುದು, ಪ್ರೀತಿ, ವಾತ್ಸಲ್ಯ ಇತ್ಯಾದಿ ಮೌಲ್ಯಗಳು ಕಸದ ಗಾಡಿಗೆ ಗುಡಿಸಿಹೋಗುವುದು, ಈ ಸಮಸ್ಯೆಯ ಒಳ ಧ್ವನಿಗಳಾಗಿವೆ. ಬೀದಿಯಲ್ಲಿ ಕಾಲುಕೆರೆಯುವಂತೆ ಅನಾಥವಾದ ಮೂಕದ ನಾಯಿ, ಗಂಡಿನ ಸಂಚಿಗೆ ತುತ್ತಾಗಿ, ಕಾಮಕ್ಕೆ ಬಲಿಯಾಗಿ, ನಿರ್ಗತಿಕಳಾಗಿ ಬಾಳುವ ಪತಿತ ಹೆಣ್ಣಿಗೆ ಸಂಕೇತವಾಗುತ್ತದೆ.

ಕೊಂಡಿದ್ದಾರೆ. ಬಾಳಿನ ಅನೇಕ ವ್ಯವಸ್ಥೆಗಳೂ, ಒಡಂಬಡಿಕೆಗಳೂ ಇಂದು ನುಚ್ಚುನೂರಾಗಿ ಹೋಗಿವೆ."

ಅ. ನ. ಕೃ. ನಮ್ಮ ಸಮಾಜದ ಭ್ರಷ್ಟವ್ಯವಸ್ಥೆ, ಅದರಲ್ಲಿ ಬದುಕುವ ಜನರ ನೀತಿನಂಬುಗೆ, ಸಲುಗೆಸಂಬಂಧಗಳನ್ನು ಎಷ್ಟು ಗಂಭೀರವಾಗಿ ಪರಿಗಣಿಸಿದ್ದರು ಎನ್ನುವುದು ನಮಗೆ ಮುಖ್ಯ. ನಾವು ನಿರ್ಮಿಸಿಕೊಂಡ ಸಮಾಜದ ನೀತಿ ನಂಬುಗೆಗಳ ಬೇರು ಸಡಲಿ ಹೇಗೆ ನಮ್ಮ ಸಾಮಾಜಿಕ ಜೀವನ ತಳಮಳಕಾರಿಯಾಗಿದೆ, ಕಳವಳಕಾರಕವಾಗಿದೆ ಎನ್ನುವುದರ ಆಳವಾದ ಅರಿವೇ ಅ. ನ. ಕೃ. ಅವರ ಪ್ರಗತಿಶೀಲ ಧೋರಣೆಗೆ ಪ್ರೇರಕವಾಗಿರುವುದು ಸ್ಪಷ್ಟ. ಕಾಮದ ಬಳಕೆ ಸಮಾಜದ ನೀತಿನಿಯಮಗಳನ್ನು, ವೈಯಕ್ತಿಕ ಜೀವನದ ಶುದ್ಧಿ, ಸದಾಚಾರಗಳನ್ನು ಅವಲಂಬಿಸದಿದ್ದರೆ ಹೇಗೆ ಒಂದು ಪರಿವರ್ತನಶೀಲ ಸಮಾಜ ಅಧಃಪತನದತ್ತ ವಾಲುತ್ತದೆ; ಹೇಗೆ ಕಾಮಪಿಪಾಸುಗಳು ಇಡೀ ಜೀವನವನ್ನು ದುರಂತದತ್ತ ತಳ್ಳುತ್ತವೆ. ಅ. ನ. ಕೃ. ಅವರ ಈ ಗಂಭೀರ ಆಲೋಚನೆ ಅವರ ಅನೇಕ ಲೈಂಗಿಕ ಪಾತಳಿಯ ಮೇಲೆ ರಚಿತವಾದ ಕತೆಗಳಲ್ಲಿ ಅನಾವರಣಗೊಳ್ಳುತ್ತದೆ. ಮಾನವತೆಯ, ನಿರ್ಮಲಾಂತಃಕರಣದ ಒಂದು ತೊಟ್ಟೂ ಇಲ್ಲದ, ಗೌರವದ ಪ್ರತಿಷ್ಠೆಯ ಮುಖವಾಡ ಹಾಕಿ ಮೆರೆಯುವ ಅನೇಕ ಗೋಮುಖ ವ್ಯಾಘ್ರಗಳನ್ನು ಬಯಲಿಗೆಳೆಯುವ ಅ. ನ. ಕೃ. ಸಮಸ್ಯೆಯ ಮೂಲದತ್ತ ತಮ್ಮ ಸೃಜನಶೀಲ ದೃಷ್ಟಿ ಹರಿಸುತ್ತಾರೆ. ದಾಂಪತ್ಯ ಜೀವನದಲ್ಲಿ ಪರಸ್ಪರರು ಕ್ಷಮಿಸಿ ಬದುಕನ್ನು ಹಸನುಮಾಡಿಕೊಳ್ಳುವ (ಯಾರು ಗೆದ್ದವರು) ಮುಕುಂದ–ರತ್ನಾ; ವಾಮಾಚಾರಕ್ಕೆ ಬಲಿಯಾದ ಲಕ್ಷ್ಮಮ್ಮನ ಗಂಡನ ಆಪತ್ತಿನ ನಿವಾರಣೆಗಾಗಿ ತಾವೇ ಪ್ರಯೋಗಿಸಿಕೊಂಡು ಹಾಸಿಗೆ ಹಿಡಿದು ನರಳಿದರೂ ಲಕ್ಷ್ಮಮ್ಮನ ದಾಂಪತ್ಯ ಜೀವನದ ಸುಖವನ್ನೇ ತಮ್ಮ ಕಾಣಿಕೆ ಎಂದು ಭಾವಿಸುವ ಗೌರೀನಾಥಶಾಸ್ತ್ರಿ (ಜಯಮಹಾಕಾಳೀ), ಅಂತ್ಯಜನ ಮನೆಯಲ್ಲೂ ಜ್ಯೋತಿಯನ್ನು ಕಾಣುವ ಮಾದರಸ, ಹೊಲೆಯ ರಂಗ ಡಾ. ರಂಗಸ್ ಆಗಿ ಬಂದಾಗ ಅವನನ್ನು 'ನೀನು ಹೊಲೆಯನಲ್ಲಪ್ಪ,

(ಕಾಮನಬಿಲ್ಲು) ಮುನ್ನುಡಿ ಪುಟ vii (ಇಪ್ಪತ್ನಾಲ್ಕು ಪ್ರಾತಿನಿಧಿಕ ಕತೆಗಳ ಒಂದು ಕಥಾಸಂಗ್ರಹ)

ಬ್ರಹ್ಮರ್ಷಿ' ಎನ್ನುವ ಶಾಸ್ತ್ರಿ, ಇತ್ಯಾದಿ ನಾನಾಸ್ತರದ ನಾನಾಮುಖದ ವ್ಯಕ್ತಿಗಳು ಅ. ನ. ಕೃ. ಕತೆಗಳಲ್ಲಿ ಮೂಡಿ ನಮ್ಮ ಹೃದಯವನ್ನು ಕಲಕುತ್ತಾರೆ.

ಹಿಂದೂ ಮುಸ್ಲಿಮ್ ಜಾತಿ ಸೌಹಾರ್ದ ಭಾರತಕ್ಕೆ ಸದಾ ಒಂದು ಸವಾಲು; ಅ. ನ. ಕೃ. ಜಾತಿ ಕಟ್ಟುಗಳನ್ನು ಮೀರಿ ಸ್ಪಂದಿಸುವ ವಿಷಮತೆಯಲ್ಲಿ ನರಳುವ ಕೆಲವು ವಿರಳ ಸಂದರ್ಭಗಳನ್ನು ಆಯ್ದು ರಚಿಸಿದ ಕತೆಗಳು 'ಬೂಬಮ್ಮ' 'ಅಗ್ನಿಕನ್ಯೆ' 'ಕಾಲಕೂಟ' 'ಪೈಗಸ್ತ' ಇತ್ಯಾದಿ. ತನಗೆ ನೌಕರಿಕೊಟ್ಟು ಉಪಕರಿಸಿದ ನಾರಾಯಣಾಚಾರ್ಯರ ಮೊಮ್ಮಗಳು ಮಾಲತಿಯ ಮದುವೆಗೆ ತನ್ನ ಮನೆಯನ್ನೇ ಮಾರಿ ನಾಲ್ಕುಸಾವಿರ ಹಣ ಕೊಟ್ಟು ಋಣ ತೀರಿಸಿಕೊಳ್ಳುವ ಹಮೀದ (ಪೈಗಸ್ತ), ತನ್ನ ಸಂಕಟದ ಸಮಯದಲ್ಲಿ ಮುಸ್ಲಿಂ ಹೆಣ್ಣುಮಗಳು 'ಬೂಬಮ್ಮ'ನಿಂದ ಒದಗಿ ಬಂದ ಸಹಾಯದ ನೆನಪಿಗಾಗಿ ತನ್ನ ಮಗಳಿಗೇ ಮುಸ್ಲಿಂ ಹೆಸರಿಡುವ ಬ್ರಾಹ್ಮಣ ಸ್ತ್ರೀ, ಸ್ನೇಹವನ್ನು ಜಾತಿಯ ವಿಷಮತೆಗೆ ಬಲಿಗೊಟ್ಟು ಸುಶೀಲಬಾಯಿಯನ್ನು ಕತ್ತರಿಸಿಹಾಕುವ ಹಮೀದ, ತಾನು ಕುಲಟೆಯಾದರೂ ಮುಸ್ಲಿಮನಿಗೆ ತನ್ನ ಭೋಗವಸ್ತುವಾಗಲು ನಿರಾಕರಿಸುವ 'ಕಾಲಕೂಟ'ದ ತಾಯಮ್ಮ ಮತ್ತು ಅವಳನ್ನು ಬಲಾತ್ಕರಿಸಿ ಹಿಂದೂ ಮುಸ್ಲಿಂ ದಂಗೆಗೆ ಕಾರಣನಾಗುವ ಕರೀಮ ಇವರೆಲ್ಲ ನಮ್ಮ ಸುತ್ತಮುತ್ತಣ ಜನಜೀವನದಲ್ಲಿ ಕಾಣುವ ಸಣ್ಣ ಜನ: ದೊಡ್ಡ ಜನ.

೯) ಒಂದು ದೃಷ್ಟಿಯಿಂದ ಅ. ನ. ಕೃ. ರಮ್ಯಸಂಪ್ರದಾಯದ ಕತೆಗಾರರೇ. ಸರಳಸಂಭಾಷಣೆ, ಅಲ್ಲಲ್ಲಿ ವಿವರಣೆ, ಪಾತ್ರ ಪರಿಸರಗಳ ನಿರೂಪಣೆ, ಂದಷ್ಟು ಬೋಧೆ, ನೀತಿ–ಭಾವುಕ ಅತಿಭಾವುಕ ವ್ಯಕ್ತಿಗಳು ಸನ್ನಿವೇಶಗಳು-ಹೀಗೆ ಎಲ್ಲವೂ ಸಹಜ ಸರಳ. 'ಕರುಳಿನಕೂಗು' 'ಸಾಹಿತ್ಯ ಸಾರ್ವಭೌಮ' 'ಹಳದಿಯ ಬಾಗಿಲು' ಮುಂತಾದ ಕೆಲವೇ ಕತೆಗಳನ್ನು ಬಿಟ್ಟರೆ ಇವರ ಬಹುತರ ಕತೆಗಳು ಕೇವಲ ಒಬ್ಬ ಕತೆಗಾರನ ಕಲ್ಪನಾ ಸೃಷ್ಟಿಗಳಾಗಿ ತೋರುತ್ತವೆ. ಇವರ ಪಾತ್ರಗಳು ಸ್ವಾನುಭವದ ನೆಲೆಗಟ್ಟಿನ ಆಳದಿಂದ ಸ್ಪಂದಿಸುವುದಿಲ್ಲ; ವಾಸ್ತವ ಜೀವನ ಸಂಘರ್ಷಕ್ಕೆ ಸಿಲುಕಿ ತಾವು ತಾವೇ ರೂಪುಗೊಳ್ಳುವುದಿಲ್ಲ. ಸಾಮಾಜಿಕ ಭ್ರಷ್ಟವ್ಯವಸ್ಥೆಯ ವಿರುದ್ಧ ಬಂಡೆದ್ದು, ಅನ್ಯಾಯ

ದೌರ್ಜನ್ಯಗಳ ವಿರುದ್ಧ ಕೆಂಡಕಾರಿ ತಾವು ಒಳಗೊಳ್ಳುವ ಬದುಕಿನ ಅನಿವಾರ್ಯ ಅಂಗದ ನಿರ್ಮಾರ್ಜನೆ ಮಾಡುವ, ದುರಂತವನ್ನು ಅನಾವರಣಗೊಳಿಸುವ ಬದುಕಿನ ಜ್ವಲಂತ ಪಿಂಡದಿಂದ ಪ್ರಾಣ ಪಡೆಯುವುದಿಲ್ಲ. ಹೀಗಾಗಿ ಅವರ ಎಲ್ಲ ಪಾತ್ರ, ಪರಿಸರ, ವಸ್ತು ಅ. ನ. ಕೃ. ಹೇಳುವ ವರದಿಗಳಾಗುವ ಅಪಾಯದಿಂದ ಪಾರಾಗಿಲ್ಲ. ಹೀಗಾಗಿ ಅವರ ಕಥೆಗಳಲ್ಲಿ ಕಂಡುಬರುವ ರಾಷ್ಟ್ರೀಯ ಕಳಕಳಿ, ಸಾಮಾಜಿಕಪ್ರಜ್ಞೆ, ವಿಡಂಬನೆ ಇತ್ಯಾದಿಗಳು ಕಥಾವಸ್ತುವಿನ ಜೀವಾಳವಾಗಿ ಬೆರೆಯುವುದು ತುಂಬ ವಿರಳ. ಆದರೆ ಅವರ ಕಥಾವಸ್ತುಗಳ ಆಯ್ಕೆಯ ವೈವಿಧ್ಯ ಮತ್ತು ವ್ಯಾಪ್ತಿ ಒಂದು ಕ್ಷಣ ನಮ್ಮನ್ನು ಬೆರಗುಗೊಳಿಸಿದರೆ ಆಶ್ಚರ್ಯವಿಲ್ಲ. ಈ ಕಾರಣದಿಂದಲೇ ಅವರ ಕತೆಗಳು ಅನೇಕಸಲ ಒಂದು ಘಟನೆಯ ತಿದ್ದಿದ ವರದಿಯಂತೆ ಗೋಚರಿಸಿದರೂ ಅವು ಸಮಕಾಲೀನ ಜೀವನದ ವಾಸ್ತವ ಪ್ರಜ್ಞೆಯ ದಾಖಲೆಗಳಾಗುತ್ತವೆ. ಕಥೆಯ ಕಲಾತ್ಮಕ ಶಿಲ್ಪದಿಂದ ಜಾರಿಕೊಂಡರೂ ಕಥೆಯ ನೈಜತ್ವವನ್ನು ಕಾಪಾಡಿಕೊಳ್ಳುತ್ತವೆ. ರಮ್ಯಸಂಪ್ರದಾಯವನ್ನು ಹಿಂದಿಕ್ಕಿ ಪ್ರಗತಿಶೀಲ ಧೋರಣೆಯನ್ನು ಸಾರಿದರೂ ಅವರ ಕಥೆಯ ಪಾತ್ರಗಳು ಉತ್ಕಟಭಾವ ಪರವಶತೆಯ ಬದಲು-ಸಾಂದ್ರವಾದ ತೀವ್ರಾನುಭವವನ್ನು ಕೊಡುವುದರ ಬದಲು ಒಂದು ವಿಧದ ಸಿದ್ಧ 'ರಸಪಾಕ' ಪರಂಪರೆಗೆ ಜೋತು ಬೀಳುತ್ತವೆ. ಆದರೆ ಇಂದಿಗೂ ಅವರ ಕಥೆಗಳ ಮೌಲ್ಯಮಾಪನ ಮಾಡುವಾಗ ನಾವು ನೆನಪಿಟ್ಟುಕೊಳ್ಳಬೇಕಾದ ಒಂದು ಮಹತ್ವದ ಮಾತು: ಅವರ ಯಾವುದೇ ಕಥೆಯ ವಸ್ತು ಕೇವಲ ಸಂಪ್ರದಾಯಕ್ಕೆ ಕಟ್ಟುಬಿದ್ದಿಲ್ಲ: ಅವರ ಯಾವುದೇ ಪಾತ್ರ ಆಡುವ ಮಾತು ಯಾರಿಂದಲೇ ಕಲಿತದ್ದಲ್ಲ; ಅನುಕರಣೆಯದಲ್ಲ. ಅದು ಅವರದೇ ಸೃಷ್ಟಿ; ಅವರ ಸ್ವಂತಿಕೆಯ ದೃಷ್ಟಿ.

೧೦) ಅ. ನ. ಕೃ. ಒಡನಾಡಿಯಾಗಿ, ಅವರ ವ್ಯಕ್ತಿತ್ವ ಮತ್ತು ಸಾಹಿತ್ಯದಿಂದ ಪ್ರಭಾವಿತರಾಗಿ-ಅದರಿಂದ ತಮ್ಮನ್ನು ಬಿಡಿಸಿಕೊಂಡು ತಮ್ಮ ದಾರಿಯನ್ನು ತಾವೇ ಕೊರೆದ ಕಾದಂಬರಿ ಪ್ರಕಾರಕ್ಕೆ ಒಂದು ಬೆಲೆಯನ್ನು ಗೌರವವನ್ನು ತಂದುಕೊಟ್ಟ ತ. ರಾ. ಸು. ಅವರ ಮಾತು ಅ. ನ. ಕೃ. ಕಥೆಗಳನ್ನು ಕುರಿತ ಒಂದು ವಿಶ್ಲೇಷಣೆಯಾಗಿದೆ:

'ಕೃಷ್ಣರಾಪುರ ಕಥೆಗಳಲ್ಲಿ ಕಂಡು ಬರುವ ರಸಪರಿಪಾಕ ಇಂಥ ಅನುಭವದ್ದು. ಕಲಿಕೆಯ ಮಾತಿನದಲ್ಲ. ಆದುದರಿಂದಲೇ ಅವರ ಕಥೆಗಳಲ್ಲಿ ವಾಸ್ತವಿಕತೆಯಿದೆ, ಬಿಗಿಯಿದೆ, ಬನಿಯಿದೆ. ಜೀವನದ ಎಲ್ಲ ದಾರಿಯಲ್ಲೂ ನಡೆದು ನೋಡಬಲ್ಲ ತ್ರಾಣವಿದೆ, ಕೆಚ್ಚಿದೆ. ತ. ರಾ. ಸು. ಹೇಳುವ ಬಿಗಿ, ಬನಿ ಇಲ್ಲದಿರಬಹುದು; ಆದರೆ ಜೀವನದ ಎಲ್ಲ ದಾರಿಗಳಲ್ಲೂ ನಡೆಯುವ, ನಡೆದು ನೋಡಬಲ್ಲ ತ್ರಾಣ ಕೆಚ್ಚು ಎಷ್ಟು ಜನ ಕಥೆಗಾರರಿಗಿದೆ?

—

# ಅ.ನ.ಕೃ ಅವರ ನಾಟಕಗಳು

—ಪ್ರಲ್ಹಾದ ಕುಮಾರ ಭಾಗೋಜಿ

ಕನ್ನಡ ಕಾದಂಬರಿ ಸಾಹಿತ್ಯ ಸಾರ್ವಭೌಮ, ಕಲಾವಿಮರ್ಶಕ, ಉಜ್ವಲ ಭಾಷಾಪ್ರೇಮಿ, ಸಂಸ್ಕೃತಿಯ ಆರಾಧಕ, ವಾಗ್ಮಿ, ಪತ್ರಿಕಾ ಸಂಪಾದಕ, ಕನ್ನಡ ನಾಡುನುಡಿಗಳ ಸರ್ವಾಂಗೀಣ ಪ್ರಗತಿಗಾಗಿ ನಾಲ್ಕು ದಶಕಕ್ಕೂ ಮಿಕ್ಕಿ ಅವಿರತವಾಗಿ ದುಡಿದವ, ಸಂಸ್ಕೃತಿ ಕರ್ನಾಟಕದ ಕಲ್ಪನೆಗೆ ರೂಪುಕೊಟ್ಟವ.–ಹೀಗೆ ವಿವಿಧ ವಿಶ್ಲೇಷಣೆಗಳಿಂದ ಅಲಂಕೃತರಾದ ಅ.ನ.ಕೃ. ತಮ್ಮ ಸಾಹಿತ್ಯ ಸೇವೆಯನ್ನು ನಾಟಕ ಬರೆದೇ ಆರಂಭಿಸಿದರೆಂದರೆ ಆಶ್ಚರ್ಯ ವೆನಿಸಬಹುದು. ಆದರೆ ಸತ್ಯವು ಕಲ್ಪನೆಗಿಂತಲೂ ಮಿಗಿಲಾದ ವೈಭವದಿಂದ ಕೂಡಿದೆ. ಅವರಿಂದ ಮೂಡಿಬಂದ ಕಾದಂಬರಿಗಳು ೧೧೨.– ಅವುಗಳಲ್ಲಿ ಸಾಮಾಜಿಕ ಕಾದಂಬರಿಗಳು ೯೭. ಐತಿಹಾಸಿಕ ಕಾದಂಬರಿಗಳು ೧೫, ಕಥಾಸಂಗ್ರಹಗಳು ೮. ಪ್ರಬಂಧಸಂಗ್ರಹಗಳು ೨೦. ಜೀವನಚರಿತ್ರೆಗಳು ಹಾಗೂ ಚರಿತ್ರೆಗಳ ಸಂಗ್ರಹಗಳು ೧೧, ಸಂಪಾದನ ಸಂಕಲನ ಗ್ರಂಥಗಳು ೧೨(ಇದರಲ್ಲೊಂದು ಕವನಸಂಕಲನವೂ ಇದೆ), ಅನುವಾದ ಗ್ರಂಥಗಳು ೩, ಹರಟೆಯ ಸಂಗ್ರಹ ೧. ಈ ವಿವಿಧ ಪ್ರವಾಹಗಳು ಬಂದು ಸೇರುವ ಅ.ನ.ಕೃ ಸಾಹಿತ್ಯ ಸಾಗರಕ್ಕೆ ೨೨ ನಾಟಕಗಳ ಪ್ರವಾಹವೂ ಕೂಡುತ್ತದೆ.

ಅ.ನ.ಕೃ. ಅವರ ನಾಟಕಗಳಿವೆಯೆ? ನಾವು ನೋಡಿಯೆ ಇಲ್ಲವಲ್ಲ ಎನ್ನುವ ವಿದ್ವಾಂಸರೂ ಇದ್ದಾರೆ. ಸ್ವಾಭಾವಿಕವೆ. ನೂರಾರು ಕಾದಂಬರಿ ಗಳಿಂದ ಜನಮನವನ್ನು ಸೆರೆಹಿಡಿದ, ಸಾಹಿತ್ಯ ಮತ್ತು ಕಾಮಪ್ರಚೋದನೆ ಯಂಥ ಕೃತಿಗಳಿಂದ ಓದುಗರನ್ನು ದಿಗ್ಭ್ರಮೆಗೊಳಿಸಿದ, ಪ್ರಗತಿಶೀಲ ಸಾಹಿತ್ಯದ ಛಳುವಳಿಯ ಮುಖಂಡರಾದ ವ್ಯಕ್ತಿಯ ಸಾಹಿತ್ಯಪ್ರಭೆಯಲ್ಲಿ ಅವರ ನಾಟಕಗಳ ಬೆಳಕು ಕಾಣದೆ ಹೋದುದೂ ಸ್ವಾಭಾವಿಕವೆ. ಕನ್ನಡ ನಾಟಕ ಸಾಹಿತ್ಯದ ಚರಿತ್ರೆ, ವಿಮರ್ಶೆಗಳನ್ನು ಬರೆದವರಿಗೂ ಕೈಲಾಸಂ, ಶ್ರೀರಂಗ, ಶಿವರಾಮಕಾರಂತರ ನಾಟಕಪ್ರತಿಭೆ ಕಣ್ಣು ಕುಕ್ಕಿದುದರಿಂದ ಅ. ನ. ಕೃ. ಅವರ ನಾಟಕಸೃಷ್ಟಿ ಮರೆಯಾಗಿರಬೇಕು. ನಾಟಕಕಾರರ ಪಟ್ಟಿ ಯಲ್ಲಿ ನಾಮೋಚ್ಚಾರ ಇಲ್ಲವೆ ಒಂದು ವಾಕ್ಯದ ಉಲ್ಲೇಖ ಕಂಡುಬರುತ್ತದೆ.

ಅವರ ಮೊದಲ ನಾಟಕವು ರೂಪುಗೊಂಡುದು ೧೯೨೪ರಲ್ಲಿ. ಕೈಲಾಸಂ ನಾಟಕಗಳು ರಂಗಭೂಮಿಗೆ ಬರತೊಡಗಿದ ಕಾಲ. ಶ್ರೀರಂಗರ ನಾಟಕಗಳು ಸೃಷ್ಟಿಯಾಗಲು ಇನ್ನೂ ಸಮಯವಿತ್ತು. ಸಾಮಾಜಿಕ ನಾಟಕಗಳಿಗೂ ಕಾಲ ಇನ್ನೂ ಪಕ್ವವಾಗಿತ್ತು. ಇಂಥ ವಾತಾವರಣದಲ್ಲಿ ಮೂಡಿಬಂದುದು ಅವರ ಚೊಚ್ಚಲು ಕೃತಿ "ಮದುವೆಯೋ ಮನೆಹಾಳೋ? ಅಥವಾ ಮುಪ್ಪಿನ ಮೋಹ." ನಾಟಕದ ಹೆಸರೂ ಕ್ರಾಂತಿಕಾರಕ! ಇದಕ್ಕೂ ಕಾರಣವನ್ನು ಹೇಳಬಹುದಾಗಿದೆ. ಅ. ನ. ಕೃ. ಅವರ ತಂದೆ ನರಸಿಂಗರಾಯರು ಮೈಸೂರು ಸಂಸ್ಥಾನದಲ್ಲಿ ರಂಗಭೂಮಿಯ ಸ್ಥಾಪನೆಗೆ ಕಾರಣರಾದವರಲ್ಲೊಬ್ಬರು. ವಿದ್ವಾನ್ ವೆಂಕಟಾಚಾರ್, ಸೆಟ್ಲೂರ್. ಸುದರ್ಶನಂ ಅಯ್ಯಂಗಾರ ಹಾಗೂ ವರದಾಚಾರ್ಯರಂಥ ಅತಿರಥಿ ಮಹಾರಥಿಗಳ ಸಂಪರ್ಕ, ಪ್ರಭಾವಗಳಿಗೆ ಒಳಗಾದವರು. ಅ. ನ. ಕೃ. ರ ಮನೆ ಅನ್ನಪೂರ್ಣೆಯಲ್ಲಿ ಇವರೆಲ್ಲ ಆಗಾಗ ಸೇರುತ್ತಿದ್ದುದೂ ಅ. ನ. ಕೃ. ರಿಗೆ ನಾಟಕ, ರಂಗಭೂಮಿಗಳ ಪರಿಚಯ ಬೆಳೆಯುವುದಕ್ಕೆ ಅವಕಾಶ ನೀಡಿತು. ಕನ್ನಡ ರಂಗಭೂಮಿಯ ಹಾಗೂ ನಟರ ಪರಿಚಯ ಅ. ನ. ಕೃ. ಅವರಿಗಿದ್ದಂತೆ ಬೇರೆಯವರಿಗೆ ಆಗುವುದೂ ಕಠಿಣವಾಗಿದ್ದಿತು.

ವರದಾಚಾರ್ಯರ ಅಭಿನಯಕ್ಕೆ ಅವರ ವ್ಯಕ್ತಿತ್ವಕ್ಕೆ ಮಾರುಹೋಗಿದ್ದ ಅ.ನ.ಕೃ. ಅವರು ಆಡುತ್ತಿದ್ದ 'ನಿರುಪಮಾ' 'ಶಕುಂತಲಾ' 'ರತ್ನಾವಳಿ' ಮೊದಲಾದುವನ್ನು ತುಂಬ ಮೆಚ್ಚಿಕೊಂಡಿದ್ದರು. ಆದರೆ ಇಂಗ್ಲೀಷ–ಫ್ರೆಂಚ ನಾಟಕಗಳ ಅಭ್ಯಾಸ ನಡೆದಂತೆ, ವಿವೇಕಾನಂದ ತಾರಾನಾಥರ ವ್ಯಕ್ತಿತ್ವ–ಗ್ರಂಥಗಳ ಪ್ರಭಾವ ಹೆಚ್ಚಿದಂತೆ, ಬದುಕಿಗೂ ಈ ನಾಟಕಗಳಿಗೂ ಸಂಬಂಧವೇ ಕಾಣದಾಯಿತು. ರಂಗಭೂಮಿಯು ಒಂದು ಪ್ರಭಾವಶಾಲಿಯಾದ ಸಾಧನ: ಸಮಾಜದ ವಿಕಾಸಕ್ಕೆ, ಆದರ್ಶಸಾಧನೆಗೆ ಶಕ್ತಿಯುತವಾದ ಅಸ್ತ್ರ ಎಂದು ಭಾವ ಮೂಡತೊಡಗಿತ್ತು. ವಿದೇಶಗಳಲ್ಲಿ ಸಾಮಾಜಿಕ ನಾಟಕಗಳು ಮಾಡುತ್ತಿದ್ದ ಕ್ರಾಂತಿಯ ಪರಿಚಯವಾಗತೊಡಗಿದ್ದಿತು. ಜೊತೆಗೆ ನಾಟಕವು ನಮ್ಮ ಜನಜೀವನದ ಪ್ರತಿಬಿಂಬವಾಗಬೇಕು—ಕಲಾತ್ಮಕವಾದ ಪ್ರತಿಬಿಂಬವಾಗಬೇಕೆಂಬ ವಿಚಾರವೂ ಮೂಡತೊಡಗಿತು. ಹಾಗಿದ್ದರೆ ವರದಾಚಾರ್ಯರಂಥ ಅಭಿಜಾತ ಕಲಾವಿದರು ಅಂಥ ನಾಟಕಗಳನ್ನು ಬರೆಯಿಸಿ

ಆಡಬಾರದೇಕೆ ಎಂಬ ಭಾವವೂ ಬಲಿಯಿತು. ಆಡಬಾರದೇಕೆ ಎಂದು ಹೊಳೆದಷ್ಟೇ ಆಯಿತು ವರದಾಚಾರ್ಯರನ್ನೇ ಕೇಳಿದರಂತೆ. ಅಭಿಜಾತ ಕಲಾವಿದನ ಪ್ರಾಮಾಣಿಕ ಉತ್ತರ ಹೀಗಿತ್ತು; ಆಡುವುದಕ್ಕೆ ನನ್ನ ಅಭ್ಯಂತರ ವಿಲ್ಲ. ಆದರೆ ಆಡದಿರುವುದಕ್ಕೆ ಎರಡು ಕಾರಣ. ಒಂದು ಸದ್ಯ ಕನ್ನಡದಲ್ಲಿ ಅಂಥ ನಾಟಕಗಳಿಲ್ಲ; ಎರಡನೆಯದು ಬರೆದು ಕೊಡಿ, ನಾವು ಅಭಿನಯಿಸು ತ್ತೇವೆ ಎಂದು ಕೇಳಿದರೂ ಬರೆದು ಕೊಡುವ ಜನರಿಲ್ಲ.

ಎರಡು ಸಾವಿರ ವರ್ಷಗಳ ಸಾಹಿತ್ಯ ಪರಂಪರೆಯಿದ್ದು ಆಡುವುದಕ್ಕೆ ಯೋಗ್ಯವಾದ ನಾಟಕಗಳು – ಅವೇಕೆ ಸ್ವತಂತ್ರವಾದ ನಾಟಗಳೇ ಇರಲಿಲ್ಲ. ಅದರಿಂದಲೇ ಮೈಸೂರಿನ ಮಹಾರಾಜರ ಆಶ್ರಯದಲ್ಲಿ ಸಂಸ್ಕೃತ ಇಂಗ್ಲೀಷ ನಾಟಕಗಳ ಅನುವಾದ ನಡೆಯಿತು. ಆ ನಾಟಕಗಳ ಪ್ರದರ್ಶನವೂ ಕೂಡ ಕೆಲವು ಪ್ರತಿಷ್ಠಿತರಿಗಾಗಿ ನಡೆಯುತ್ತಿತ್ತು. ಕನ್ನಡ ಸಾಹಿತ್ಯಕ್ಕೆ ಅದೇ ನವೋದಯ ಆರಂಭವಾದುದರಿಂದ, ಸುಶಿಕ್ಷಿತ ಮಧ್ಯಮವರ್ಗ ರಮ್ಯ ಕಾವ್ಯ, ಕಥೆಗಳಲ್ಲಿಯೇ ಸಂತೃಪ್ತಿ ಪಡೆಯುತ್ತಿದ್ದವರು. ಅದೊಂದು ಕಥಾ ಕಾಲ. ಕ್ಷೇಪದ ಮಾದರಿ. ನಾಟಕ ಸೃಷ್ಟಿ ಸುಲಭವಲ್ಲ. 'ಕಾವ್ಯೇಷು ನಾಟಕಂ ರಮ್ಯಂ'. ಸಾಹಿತ್ಯಸೌಧದ ಕಳಸವದು. ಕಾವ್ಯದೇವಿಯ ಮುಕುಟ ಮಣಿ· ಅದರ ಸೃಷ್ಟಿಗೆ ತೊಡಗಬಲ್ಲ ಸಾಹಿತಿ ಕನ್ನಡದಲ್ಲಿ ಇನ್ನೂ ಹುಟ್ಟಿಲ್ಲ ಎನ್ನುವು ದನ್ನು ವರದಾಚಾರ್ಯರು ಸೂಚ್ಯವಾಗಿ ನುಡಿದರು. ಆಗಲೇ ಕೈಲಾಸಂರ ನಾಟಕಗಳು ಬರತೊಡಗಿದ್ದವು. ಆದರೆ ಹಿರಿಯ ಕಂಪನಿಗಳು ಎತ್ತಿಕೊಂಡು ಆಡಬಲ್ಲ ನಾಲ್ಕೈದು ಗಂಟೆಗಳ ಕಾಲ 'ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಮ್' ಎನ್ನುವ ಕೃತಿಗಳು ಕನ್ನಡದಲ್ಲಿಲ್ಲ ಎಂಬುದೇ ಅವರ ಅಭಿಪ್ರಾಯವಾಗಿದ್ದಿತು.

ಆದರೆ ಪಾಶ್ಚಾತ್ಯ ನಾಟಕಗಳು, ಸಾಹಿತ್ಯಗಳಿಂದ ಪ್ರಭಾವಿತರಾದ ಪ್ರತಿಭಾವಂತರಲ್ಲಿ ಕ್ರಾಂತಿಯ ಉದಯವಾಗತೊಡಗಿದ್ದಿತು. ಹದಿನಾರು ವಯಸ್ಸಿನ ಅ.ನ.ಕೃ. ಯೌವನದ ಉಕ್ಕುವ ಉತ್ಸಾಹದಲ್ಲಿ ವರದಾಚಾರ್ಯರ ಮಾತಿಗೆ 'ಯಾರಾದರೂ ಬರೆದು ಕೊಟ್ಟರೆ ಆಡುತ್ತೀರಾ ?' ಎಂದು ಕೇಳಿ ಮರುದಿನವೇ ತಾವೇ ಒಂದು ನಾಟಕ ಬರೆದುಕೊಡುವುದಾಗಿ ಮಾತು ಕೊಟ್ಟ

ರಂತೆ. ಮರುದಿನವೇ ಆಚಾರ್ಯರ ಕೈಯಲ್ಲಿ ಮೂರಂಕಿನ ನಾಟಕದ ಹಸ್ತ ಪ್ರತಿಯನ್ನೂ ಇಟ್ಟರಂತೆ. ಅದನ್ನು ಓದಿ ಹರ್ಷ ಉಕ್ಕಿ ಅ.ನ.ಕೃ. ಅವರನ್ನು ತಬ್ಬಿಕೊಂಡು ಆನಂದದ ಕಂಬನಿ ಸೂಸಿದರಂತೆ. ಅಂದು ೧೯೨೪ ರಲ್ಲಿ–ಸಿದ್ಧವಾದ ಕೃತಿ 'ಮದುವೆಯೋ ಮನೆಹಾಳೋ.'

ಅ. ನ. ಕೃ. ಅವರ ಪ್ರಥಮ ಸಾಹಿತ್ಯಕೃತಿಯ ಹಿನ್ನೆಲೆಯಲ್ಲಿ ಇಂಥ ನಾಟಕೀಯ ಸನ್ನಿವೇಶವಿದೆ. ಈ ಘಟನೆಯು ನಡೆಯದಿದ್ದರೆ ಸಾಹಿತ್ಯ ಲೋಕಕ್ಕೇ ದೊಡ್ಡ ಹಾನಿಯಾಗಬಹುದಿತ್ತೇನೊ! ಅ.ನ.ಕೃ. ಸಾಹಿತ್ಯ ರಂಗಕ್ಕೆ ಬಾರದೇ ಹೋಗಬಹುದಿತ್ತು.

ನಾಟಕ ರಚನೆಯಾದರೂ ಅದು ಪ್ರಕಟವಾಗಲು ನಾಲ್ಕು ವರ್ಷ ಕಾಯಬೇಕಾಯಿತು (ಪ್ರಥಮ ಮುದ್ರಣ ೧೯೨೮ ರಲ್ಲಿ). ಅದು ಪ್ರಕಟ ವಾದಾಗ ಪಂಡಿತ ತಾರಾನಾಥರಾಯರು "ಸತ್ಯಲಹದ ಪರಿಣಾಮವೇ ಕಲಾಪ್ರಪಂಚವೆಂಬುದು ಮಹಾನುಭಾವರ ಮತ. ಹೀಗಿರುವಾಗ ಹೊಸ ದಾದ ಯುಗವನ್ನು ಹುಟ್ಟಿಸಬೇಕೆಂದು ಸೊಂಟಕಟ್ಟಿಕೊಂಡ ಯುವಕರು ಹಳೆಯದಾಗಿರುವಂಥಾದ್ದೆಲ್ಲವನ್ನೂ ಪೂಜಿಸುವರೋ? ಅವರ ವಿಚಾರಗಳೂ ಕಲಾಸಾಹಿತ್ಯಗಳೂ ಹೊಸ ಹುರುಪಿನವೇ ಹೊಸ ಮಾದರಿಯವೇ ಆಗಿರ ತಕ್ಕದ್ದಲ್ಲವೇ ?"

"ಶ್ರೀ ಕೃಷ್ಣರಾಯರ ಈ ನಾಟಕವು ನವಯುಗದ ನವ ಉತ್ಪತ್ತಿಯು. ಹಿಂದೆ ನೋಡುವವರಿಗದು ಅಯೋಗ್ಯವಾಗಿ ಕಾಣಬರಬಹುದು. ಆದರೂ ಮುಂದೆ ನೋಡುತ್ತ ಸತ್ಯಯುಗದ ಬುನಾದಿಯನ್ನು ಹಾಕಲಿಚ್ಛಿಸುವವರಿಗೆ ಇದು ಹಿತವನ್ನು ಮಾಡದಿರಲಾರದು" ಎಂದು ಹರಕೆಯಿತ್ತಿದ್ದಾರೆ. ಶ್ರೀ ಸಿ. ಕೆ. ವೆಂಕಟರಾಮಯ್ಯನವರು ಈ ಪ್ರಹಸನದ ರಸವಿಮರ್ಶೆಯನ್ನು ಉಪೋದ್ಘಾತದಲ್ಲಿ ಕೊಟ್ಟು "ವಿಷವಿವಾಹದ ವಿಷಫಲವು ಚಿತ್ರಿಸಲ್ಪಟ್ಟಿದ್ದರೆ ಗ್ರಂಥವು ಈಗಿನಷ್ಟು ರಮ್ಯವಾಗುತ್ತಿರಲಿಲ್ಲ. ಆಗಿನದು, ಹೂಬಿಸಿಲಿರುವಾಗ ಹನಿಮಳೆಯು ಬೀಳುವ ದೃಶ್ಯವಾಗುತ್ತಿರಲಿಲ್ಲ. ಕಾಳರಾತ್ರಿಯಲ್ಲಿ ಕಾರ್ಮುಗಿಲಿನಿಂದ ಬೀಳುವ ಮುಸಲಧಾರೆಯನ್ನು ಆಗಿನ ದೃಶ್ಯವು ಹೋಲುತ್ತಿತ್ತು" ಎಂದಿದ್ದಾರೆ.

ಹತ್ತು ಪಾತ್ರಗಳುಳ್ಳ ಈ ಪ್ರಹಸನ ಒಂದು ಸಮಾಜ ವಿಡಂಬನೆ (Satire). ಶೇಷಗಿರಿರಾಯನೆಂಬ ವೃದ್ಧನೊಬ್ಬ ಮುದಿಹುಚ್ಚಿನಲ್ಲಿ ಮದುವೆಯಾಗುವ ಆಸೆ ತಾಳಿ ರಾಮಾವಧಾನಿ ಎಂಬ ಪುರೋಹಿತನ ಸಹಾಯದಿಂದ ಎಳೆಹೆಣ್ಣನ್ನು ಮದುವೆಯಾಗಲು ಇಚ್ಛಿಸುತ್ತಾನೆ. ಅವಧಾನಿಗೋ ರಾಯರಿಂದ ಹಣ ಸುಲಿಯುವ ಆಸೆ. ಇಂಥ ಸುಲಿಗೆಗಾರನ ಹೃದಯದಲ್ಲಿಯೂ ಒಳ್ಳೆಯತನ ಇದೆ. ಆದರೆ ಲೋಭವು ಅದನ್ನು ಸಂಪೂರ್ಣವಾಗಿ ಮುಚ್ಚುತ್ತದೆ. ಆರಂಭದಲ್ಲಿ "ತನಗಾಗಿ—ತಾವು ಕೊಡುವ ಸಂಭಾವನೆಗಾಗಿ—ಸುಳ್ಳುಜಾತಕ ಬರೆದು ಕೊಡುವುದೋ? ಚೆನ್ನಾಗಿದೆ ಸ್ವಾಮೀ...." ಎನ್ನುವವನು ರಾಯರ ಸುಳ್ಳ ಜಾತಕ ಬರೆದುಕೊಟ್ಟು ವಿವಾಹ ಮಾಡುವುದಕ್ಕೂ ಸಿದ್ಧನಾಗುತ್ತಾನೆ. ಆದರೆ ಶೇಷಗಿರಿರಾಯನ ತಮ್ಮನ ಮಗ ಗಂಗಾಧರ, ಗಂಗಾಧರನ ಮಿತ್ರ ಕಿಟ್ಟಿ, ಇವರ ಇನ್ನಿಬ್ಬರು ಮಿತ್ರರು ರಾಜು—ಮಾಧು ಇವರ ಆಟದಿಂದ ರಾಯರು ಬುದ್ಧಿ ಕಲಿಯುತ್ತಾರೆ. ಮಾಧು ಹೆಣ್ಣು ವೇಷ ಹಾಕಿ ರಾಯರ ಹೆಂಡತಿಯಾಗಿ ರಾಯರನ್ನೇ ಕೆರಳಿಸಿ ಹಿಂಡುತ್ತಾನೆ. ಕೊನೆಗೆ ಆಕೆ—ಆತನಲ್ಲ ಎಂದು ಪ್ರಕಟವಾಗಿ ರಾಯರು 'ಬದುಕಿದೆಯಾ ಬಡಜೀವವೆ' ಎನ್ನುವಂತಾಗುತ್ತದೆ.

ಇಲ್ಲಿ ಅಂದಿನ ಸಮಾಜಜೀವನ, ಮಧ್ಯಮ ವರ್ಗದವರ ಜೀವನ ಮೂಡಿಬಂದಿದೆ. ಕಾಲೇಜು ವಿದ್ಯಾರ್ಥಿಗಳಾಗಿರುವ ಗಂಗಾಧರ ಹಾಗೂ ಅವರ ಮಿತ್ರರ ಮೂಲಕ ಆ ಜೀವನದ ಹುಡುಗಾಟ, ಹಿರಿಯರಿಂದ ಹಣ ಸೆಳೆದು ಮೋಜು ಮಾಡುವ ಮನೋವೃತ್ತಿಯ ದರ್ಶನವಾದರೆ, ಬೋರ, ನಂಜಮ್ಮ, ಭಾಗೀರಥಮ್ಮನವರ ಪಾತ್ರಗಳಲ್ಲಿ ಜನರ ಮುಗ್ಧತೆಯ ದರ್ಶನವಾಗುತ್ತದೆ. ವೈದಿಕ ವೃತ್ತಿಯು ಗೊಡ್ಡುತನಕ್ಕೆ ಇಳಿದು ಆಗಿರುವ ಪರಿಣಾಮ ಅವಧಾನಿಯ ಮಗ ಸುಬ್ಬುವಿನಲ್ಲಿ ಕಾಣುತ್ತದೆ. ಮುಪ್ಪಾದರೂ ಕಾಮುಲಾಲಸೆಗೆ ಒಳಗಾಗುವ ಗಂಡಿನ ವಿಚಿತ್ರ-ಚಿತ್ರ ರಾಯರದಾಗಿದೆ. ಅಂದಿನ ಕಾಲದಲ್ಲಿ ಮುದುಕರು ಎಳೆವಯಸ್ಸಿನ ಮುಗ್ಧ ಬಾಲಿಕೆಯರನ್ನು ವಿವಾಹವಾಗುವುದನ್ನು ಗೇಲಿ ಮಾಡುವ ಕ್ರಾಂತಿಕಾರಿ ಪ್ರಹಸನವಿದು. ಸಮಾಜದ ಅಂಕ-ಡೊಂಕನ್ನೆಲ್ಲ ಅಣಕುಮಾಡಿ, ಕೆಣಕಿ, ಟೀಕೆಮಾಡಿ, ಚುಚ್ಚಿ-ಚುಚ್ಚಿ ಸಮಾಜವನ್ನು ತಿದ್ದಲು ಅನುಸರಿಸಿದ ದಾರಿ ಅ.ನ.ಕೃ.

ಅವರದು. ಸೃಜನಶೀಲ ನಾಟಕಕಾರನು ತಾನು ಬದುಕುವ ಸಮಾಜಕ್ಕೆ ಭೂತಗನ್ನಡಿಯನ್ನೇ ಹಿಡಿಯುತ್ತಾನೆ. ಅಂತೆಯೇ ಅಸಾಧ್ಯವೆನ್ನಿಸುವ ಸಂಗತಿಗಳೂ ಅಲ್ಲಿ ಕಾಣುತ್ತವೆ. ಗಂಡಿಗೆ ಹೆಣ್ಣಿನ ವೇಷ ಹಾಕಿದರೆ ಶೇಷಗಿರಿ ರಾಯನಿಗೆ ತಿಳಿಯಲಿಲ್ಲವೇ ? ಮುಪ್ಪಾಗಿದ್ದರೂ ಅವರೇನು ಮೂರ್ಖರೇ? ಎನ್ನಬಹುದು. ಅದು ಗಂಡಸರೇ ಹೆಣ್ಣು ವೇಷ ಹಾಕುತ್ತಿದ್ದ ಕಾಲ. ಸೀತೆಯ ಪಾತ್ರ ಮಾಡುತ್ತಿದ್ದವನನ್ನು 'ರಾಮ'ನೂ, ಇತರ ನಟರೂ, ಪ್ರೇಕ್ಷಕರೂ ಹೆಣ್ಣೆಂದೇ ಭಾವಿಸಿಕೊಳ್ಳುತ್ತಿದ್ದ ಕಾಲ. ಅಂದಿನ ರಂಗಭೂಮಿಗೆ ಸಹಜವಾಗಿತ್ತು ಈ ಯೋಜನೆ. ಕೊನೆಯ ಪರಿಣಾಮವೂ ಅಷ್ಟೇ ಸಹಜ ಎನ್ನಬೇಕು.

ಮೊದಲನಾಟಕ ಒಂದು ವಿಡಂಬನೆ ಮಾತ್ರವಾಯಿತು. ಅದೇ ಸಮಾಜದಲ್ಲಿಯ ವಿಷಮತೆಯು ಸಂಪ್ರದಾಯಗಳು ನಮ್ಮ ಸಂಸ್ಕೃತಿಯನ್ನೇ ಅವನತಿಗಿಳಿಸಿದ ಜೀವಂತ ಚಿತ್ರಣ 'ಆಹುತಿ' ಎಂಬ ನಾಟಕದಲ್ಲಿ ಮೂಡಿ ನಿಂತಿದೆ. ಶ್ರೀಪತಿರಾಯನ ಅಕ್ಕ ಗುಂಡೂಬಾಯಿ, ಅವಳ ಮಗಳು ಬಾಲ ವಿಧವೆ ರಾಧೆ, ಶ್ರೀಪತಿರಾಯನ ಮಗ ರಘು, ಸುಧಾರಣಾವಾದಿ ಎಂದು ಹೇಳಿಕೊಳ್ಳುತ್ತಲೇ ರಾಧೆಯಲ್ಲಿ ತನ್ನ ಕಾಮದ ಹಸಿವು ಹಿಂಗಿಸಿಕೊಳ್ಳುವ ಡಾ. ಮಾಧೂ, ಯೌವನದಲ್ಲಿ ಕಾಲಿಟ್ಟ ರಾಧೆಯಲ್ಲಿ ಸಹಜವಾಗಿ ಮೂಡುವ ಆಶೆ-ಆಕಾಂಕ್ಷೆಗಳು, ಅವಳ ಅಂತರಂಗದಲ್ಲೇಳುವ ಭಾವಸೂಕ್ಷ್ಮತೆಗಳನ್ನು ಅರಿಯಲು ಪ್ರಯತ್ನಿಸದ ಶ್ರೀಪತಿರಾಯ–ಗುಂಡುಬಾಯಿ–ಎಲ್ಲ ಪಾತ್ರ ಗಳೂ ಜೀವಂತವಾಗಿ ಓಡಾಡುತ್ತವೆ. ಮಾಧುವಿನ ಕಾಮತೃಪ್ತಿಗೆ ಈಡಾಗಿ ರಾಧೆ ಗರ್ಭಿಣಿಯಾದಾಗ ರಘುವೇ ಅವಳನ್ನುಳಿಸುವುದಕ್ಕಾಗಿ ತ್ಯಾಗಕ್ಕೆ ಸಿದ್ಧ ನಾಗುತ್ತಾನೆ. "ಪ್ರಪಂಚದಲ್ಲಿ ಯಾರಿಗೆ ಯಾರೂ ಆಗುವುದಿಲ್ಲ. ನೊಂದ ಮನಸ್ಸುಗಳಿಂದ ಒಂದಾಗಬೇಕು" ಎಂಬ ಮಾತು ಈ ನಾಟಕಕ್ಕೆ ಕೊನೆ. ಸಾಮಾಜಿಕ ಸಮಸ್ಯೆಯನ್ನು ಚಿತ್ರಿಸುವಾಗಲೂ ವ್ಯಕ್ತಿಗಳ ಹೃದಯದಲ್ಲಿಯ ಭಾವಗಳ ಏಳಿತ-ಹೋರಾಟ–ಆಕುಂಚನ–ವಿಸ್ತರಣಗಳನ್ನು ನಾಟಕದ ಪರಿಣಾಮಕ್ಕೆ ಭಂಗಬಾರದಂತೆ ಮೂಡಿಸಿರುವುದು ಇಲ್ಲಿಯ ಅದ್ಭುತ ಸಾಧನೆ. ಆದರೆ ಒಂದು ಮಾತು ಸತ್ಯ. ಕೈಲಾಸಂ ಅವರಲ್ಲಿ ಕಾಣುವ ಭಾವಾರ್ದ್ರತೆ ಅ.ನ.ಕೃ ನಾಟಕಗಳಲ್ಲಿ ಕಾಣದು. ವೈಚಾರಿಕ ತೀಕ್ಷ್ಣತೆ ಇಲ್ಲಿ ಪ್ರಧಾನ.

'ಧರ್ಮಸಂಕಟ' ವೇಶ್ಯಾಸಮಸ್ಯೆಯನ್ನು ಎತ್ತಿಕೊಂಡ ನಾಟಕ. ಪುರುಷ ಪ್ರಧಾನವಾದ ಸಮಾಜವು ಸ್ತ್ರೀಯನ್ನು ಕಾಣುವ ಕೀಳು ದೃಷ್ಟಿಯನ್ನು ವಿವರ ವಿವರವಾಗಿ ಕೊಡಲಾಗಿದೆ ಇಲ್ಲಿ. ಈ ನಾಟಕದ ಪಾತ್ರಗಳಾದ ಜಾಗೀರದಾರ್ ಸೀತಾರಾಮರಾಯ, ಲಾಯರ್ ಸುಬ್ಬರಾಯ, ಹೈಸ್ಕೂಲು ಮೇಷ್ಟ್ರು ನಾರಣಪ್ಪ, ಕಾಲೇಜ ವಿದ್ಯಾರ್ಥಿ ವಿಶ್ವೇಶ್ವರಯ್ಯ ಒಬ್ಬೊಬ್ಬರೂ ರಸಿಕ(?) ರೇ! ಡ್ರಿಂಕಿಂಗೂ ಡಿಬಾಚಿಂಗೂ ಸಿವಿಲಾಯಿಜ್ಡ್ ಅಕಾಂಪ್ಲಿಶ್‌ಮೆಂಟ್ಸ್ ಎನ್ನುವವ ಜಾಹಾಗೀರದಾರ ಸೀತಾರಾಮಯ್ಯ! 'ಸಂ ಅಷ್ಟೂ ಇಲ್ದೆ ಇದ್ರೆ ಲೈಫ್ ಇದ್ದೂ ಏನು ಸಾರ್ಥಕ ವಿಶ್ವೇಶ್ವರಯ್ಯ? ನೀವಿನ್ನೂ ಹುಡುಗರು. ಪ್ರಪಂಚ ಕಂಡವರಲ್ಲ. ಸಂಸಾರದಲ್ಲಿ ನಾವು ಅನುಭವಿಸೋ ಕಷ್ಟಗಳಿಗೆ ಅವು ದೊಡ್ಡ 'ರಿಲೀಫ್' ಇದ್ದ ಹಾಗೆ, ಎಂದು ಆತನ ನುಡಿ. ಸ್ಕೂಲ ಮೇಷ್ಟರ ನಾರಾಣಪ್ಪನ ಮಾತೋ ದೇವರೇ ಗತಿ! "ನೈಟಿಗೋಸ್ಕರವಯ್ಯಾ, ನಾನೇನು ರಾಮನ ಹಾಗೆ ಷಂಡನೇ ಏಕಪತ್ನೀ ವ್ರತಸ್ಥನಾಗುವುದಕ್ಕೆ?"

ಇಂಥವರೆಲ್ಲ ಸೇರಿ ಅನಾಥ ಸ್ತ್ರೀಯರ ಉದ್ಧಾರಕ್ಕೆ ಸಂಸ್ಥೆ ಬೇರೆ ಕಟ್ಟಬೇಕೆನ್ನುತ್ತಾರೆ. ಅವರಿಗೆ ಹೆಣ್ಣುಮಕ್ಕಳನ್ನು ಅಡ್ಡದಾರಿಗೆ ಎಳೆಯುವ ಸರಸ್ವತಮ್ಮ ಸಹಾಯಕಳು. ಅವಳ ಮಾತು ಕೇಳಿ: ' ಗರತೀರೆಲ್ಲಾ ಸೂಳೆಗಾರಿಕೆ ಮಾಡ್ತಾ ಇರೋ ಹೊತ್ನಿ, ಗೆಜ್ಜೀ ಕಟ್ಟಿದ ಗರ್ತೀರ್ನ ಕೇಳೋರೆ ಇಲ್ಲದ ಹಾಗಾಯಿತು. ಅವರಿಗೆ ಹೊಟ್ಟೆ ಬಟ್ಟೆ ಕಾರಣವಲ್ಲ. ಒಡವೆ ವಸ್ತ್ರ ಕಾರಣ. ಅವರಿಗೆ ಮನೆ–ಮಕ್ಕಳು ಬೇಕಿಲ್ಲ; ಮಿನಮಿನಗೋ ವಜ್ರದ ವಾಲೆ ಮೂಗುಬಟ್ಟು ಬೇಕು. ಇನ್ನೊಂದು ಕಾರಣ ಏನೆಂದರೆ ಕೈಲಿ ಹರಿದೋರಿಗೆ ಒಳ್ಳೇ ಪ್ರಾಯದ ಹುಡುಗೀರ್ನ ಕಟ್ಟೋದು'. — ಹೀಗೆ ಆಡುವ ಈ ಸರಸ್ವತಮ್ಮನ ಕೃತಿ ಗಂಡ ಹೆಂಡಿರಲ್ಲಿ ಕಚ್ಚಾಟ ಬೆಳಸಿ ಹೆಂಡಂದಿರನ್ನು ಹಾದರಕ್ಕೆ ಎಳೆಯುವುದು.

ಆವರೆ ಜಾಗೀರದಾರ ಸೀತಾರಾಮಯ್ಯನ ತಂಗಿ ಕಮಲೆಯೋ ಇಂಥ ಜೀವನಕ್ಕಾಗಿ ಬಂದುದನ್ನು ಕಂಡಾಗ ಆತನ, ಸ್ಥಿತಿ, ಆತನ ಸಂಕಟವನ್ನು ತಿಳಿಸಲಾಗಿದೆ. ಆಗ ಸರಸ್ವತಿ ಕೇಳುತ್ತಾಳೆ: "ಸ್ವಂತ ತಂಗೀಲಿರೋ ಅಭಿಮಾನ

ಮಿಕ್ಕವರಲ್ಲಿ ಎಲ್ಲಿ ಹೋಗಿತ್ರಿ? ನೀವು ಹಿಂದೆ ಎಷ್ಟೋ ಹೆಂಗಸರನ್ನ ಕೆಡಿಸಿ ದಾಗ ಅವರವರ ಅಣ್ಣಂದಿರಿಗೆ ಗೊತ್ತಾಗಿದ್ರೆ ಅವರೂ ಹೀಗೇ ನೊಂದು ಕೊಳ್ಳುತಿದ್ರು ಅನ್ನೋದು ಮನಸ್ಸಿಗೆ ಬರಲಿಲ್ಲವೇನು?" ಎಂದಾಗ ಆಘಾತ ವೆನಿಸಿ ಅವಳ ಬಗೆಗೆ ಆದರ ಉಂಟಾಗುತ್ತದೆ. ಆದರೂ ಇಂಥದೇ ವಸ್ತು ವುಳ್ಳ ಕೈಲಾಸಂ ಬರೆದ 'ಸೂಳೆ' ನಾಟಕದ ಸೂಳೆಯ ಉದಾತ್ತ ಮಾನ ವೀಯತೆ ಇಲ್ಲಿ ಕಾಣದು.

೧೯೩೭ರಲ್ಲಿ ಪ್ರಕಟವಾದ 'ಗೋಮುಖವ್ಯಾಘ್ರ' ನಾಟಕದಲ್ಲೂ ಸ್ತ್ರೀ ಪುರುಷ-ಸಂಬಂಧದ ವಿಷಯವೇ ಮೂಡಿದೆ. ಅನ್ಯೋನ್ಯವಲ್ಲದ ದಾಂಪತ್ಯವು ಹೇಗೆ ಅನ್ಯ-ಅನ್ಯದಲ್ಲಿ(ರಲ್ಲಿ) ಮುಕ್ತಾಯವಾಗುತ್ತದೆ ಎಂಬುದನ್ನು ತೋರಿ ಸುವುದೇ ಇದರ ಉದ್ದೇಶ ಎಂದು ಮುನ್ನುಡಿಯಲ್ಲಿ ಹೇಳುವ ಅ.ನ.ಕೃ. ನಾಟಕಕಾರನ ಮುಖ್ಯೋದ್ದೇಶ ಸತ್ಯಾನ್ವೇಷಣೆ ಎನ್ನುತ್ತಾರೆ. ಸಮಾಜದಲ್ಲಿ ಕಾಣುವ ವಿಷಮ ಜೀವನದ ಮೂಲಕ್ಕೆ ಇಳಿಯಬೇಕೆನ್ನುತ್ತಾರೆ. ಹೀಗಿ ದ್ದರೂ ಅವರಿಗೆ "ನವೋದಯದ ಪರಮಶತ್ರುಗಳೆಂದರೆ ಹಳೆಯ ಧರ್ಮದ ಪೂಜಾರಿಗಳು; ಮೃತ ಪರಂಪರೆಯ ಪ್ರವಾದಿಗಳು" ಎಂಬ ಖಚಿತ ವಿಶ್ವಾಸ ವಿದೆ. ಇದರಿಂದ ಅವರು ಸಮಸ್ಯೆಯ ಪರಿಘವನ್ನು ಮಾತ್ರ ತಟ್ಟುತ್ತಾರೆ; ಅದರ ಕೇಂದ್ರಕ್ಕೆ ಇಳಿಯುವುದಿಲ್ಲ. ಇಲ್ಲಿಯ ಪ್ರಮುಖ ಪಾತ್ರಗಳು ಶ್ಯಾಮಸುಂದರ ಸಾಹಿತಿ; ಸಾತ್ವಿಕ ಮನುಷ್ಯ. ಇನ್ನೊಬ್ಬರ ಅಂತರಂಗವನ್ನು ತಿಳಿಯಬಲ್ಲ ಬಡಜೀವ. ಇಂದಿರಾ ಅವನ ಹೆಂಡತಿ ಮೋಹವಶವಾಗಿ, ಪತಿಯ ಸ್ನೇಹಿತನಾದ ರಂಗನಾಥನೊಡನೆ ಸ್ವೈರವಿಲಾಸಕ್ಕೆ ತೊಡಗಿದಳು. "ನಾಲಕ್ಕು ಪುಸ್ತಕ ಬರೆದ್ರೆ ಬಂತೇ ಭಾಗ್ಯ — ಹೆಂಡತೀನ ಸರಿಯಾಗಿ ಬಾಳ್ಸೋ ಯೋಗ್ಯತೆಯಿಲ್ದೆ ಇರೋರು ಮದ್ವೆ ಯಾತಕ್ಕೆ ಮಾಡ್ಕೋತಾರೋ?" ಎಂದು ಗಂಡನನ್ನೇ ಮೂದಲಿಸುವವಳು. ರಂಗನಾಥನಿಗೆ "ಏನ್ಮಾಡ್ಲಿ ಡಿಯರ್, ಶನಿ ರಾತ್ರಿಯೆಲ್ಲ ಎಚ್ಚರವಾಗಿ ಬರೀತಾನೇ ಕೂತಿದ್ದ" ಎನ್ನುವ ಮಹಾ ಪತಿವ್ರತೆ! ಇಂಥ ವಿಕಾರ ವಿವರದ ಚಿತ್ರ ಕೊಡುವುದರ ಜೊತೆ ರಂಗನಾಥನ ಹೆಂಡತಿ ಪದ್ಮನಂಥ ಸಾಧ್ವಿಯನ್ನೂ ಚಿತ್ರಿಸಿದ್ದಾರೆ.

ಈ ವಸ್ತುವಿನ ವಾಸ್ತವತೆ- ಸಾಧ್ಯತೆಗಳನ್ನೆಲ್ಲ ಒಪ್ಪಿದರೂ ರಂಗದ ಮೇಲೆ ಒಬ್ಬನ ಹೆಂಡತಿ ಬೇರೊಬ್ಬನನ್ನು ಅಪ್ಪುವ, ಮುದ್ದಿಸುವ ಅಭಿನಯ

ನಮ್ಮ ಭಾರತದ ರಂಗಭೂಮಿಯು ಗೌರವಕ್ಕೆ ಉಚಿತವೇ ಎಂಬ ಸಮಸ್ಯೆ ಉಳಿಯುತ್ತದೆ.

ಈ ಎಲ್ಲ ನಾಟಕಗಳಲ್ಲಿ ಕಾಮವು ಮಾನವರ ಜೀವನವನ್ನು ರೂಪಿಸುವ, ಕುರೂಪಿಸುವ ಒಂದು ಪ್ರಬಲಶಕ್ತಿಯೆಂದು ಅ.ನ.ಕೃ. ನಂಬಿರುವುದು ಕಾಣುತ್ತದೆ. ಕಾಮ ಮಾನವಜೀವನದ ಎಲ್ಲ ಕಾರ್ಯಗಳಿಗೂ ಮೂಲ ಎಂಬ ಮನಶ್ಶಾಸ್ತ್ರಜ್ಞರ ತತ್ವದಲ್ಲಿ ನಂಬಿಕೆ ವ್ಯಕ್ತಮಾಡಿದ್ದಾರೆ. ಆದರೆ ಗುಬ್ಬಚ್ಚಿಗೂಡು ಮತ್ತು ಬಣ್ಣದ ಬೀಸಣಿಗೆಯಲ್ಲಿ ಕಾಣುವ ಚಿತ್ರ ಬೇರೆ ಬಗೆಯಾದುದು

ಗುಬ್ಬಚ್ಚಿಗೂಡಿನಲ್ಲಿಯ ವೈಲಾರಯ್ಯ ಮಧ್ಯ ವಯಸ್ಸು ಮೀರಿದ ಮನೆಯ ಯಜಮಾನ. ಸರೋಜ ಚಿಕ್ಕವಯಸ್ಸಿನ ಹೆಂಡತಿ, ಶಂಕರ ವೈಲಾರಯ್ಯನ ಅಣ್ಣನ ಮಗ; ಆದರೆ ಸರೋಜಳನ್ನು ಮದುವೆಯ ಮೊದಲೇ ಪ್ರೀತಿಸಿದವ. ಇಲ್ಲಿ ಸಹಜವಾಗಿ ವಿಷಮ ವಿವಾಹದ ಸಮಸ್ಯೆ. ಪರಿಹಾರ ಶಂಕರನೊಡನೆ ಸರೋಜ ಹೆಂಡತಿಯಾಗಿ ಜೀವನಕ್ಕೆ ಸಿದ್ಧವಾಗುವುದು; ಇದಕ್ಕೆ ವೈಲಾರಯ್ಯ ಅಸ್ತು ಎಂದು ಅವಳ ಮಾವನಾಗಿ ಅದೇ ಮನೆಯಲ್ಲಿ ಉಳಿಯುವುದು. ಪಾತ್ರಗಳಲ್ಲಿ ಉದಾತ್ತಗುಣಗಳನ್ನು ತೋರುವ ಪ್ರಯತ್ನವಿದೆ.

ಬಣ್ಣದ ಬೀಸಣಿಗೆ ನಾಲ್ಕೇ ಪಾತ್ರಗಳಲ್ಲಿ ಮೂಡಿಬಂದ ಕಲಾತ್ಮಕ ನಾಟಕ. ಅದರಲ್ಲಿ ಒಂದು ಪಾತ್ರ ಒಂದೂವರೆ ವರ್ಷದ ಮಗು, ಅಳುವುದು-ಸುಮ್ಮನಾಗುವುದು ಇಷ್ಟೆ ಅದರ ಕೆಲಸ. ಗಂಡ-ಹೆಂಡತಿ ಹಾಗೂ 'ತಾಯಿ' (ಮಗುವಿನ) ಎಂಬ ಮೂರೇ ಪಾತ್ರಗಳಿಂದ ಕಲಾಸೃಷ್ಟಿಯಾಗಿ ನಿಂತಿದೆ. ಆ 'ತಾಯಿ' ಗಂಡನ ಮೊದಲ ಹೆಂಡತಿ. ಅಪಾರ ಪ್ರೀತಿಯನ್ನು ಗಂಡ ತೋರುವಾಗಲೂ ಸಿನೇಮಾ ಪ್ರಪಂಚದ ಥಳಕಿಗೆ ಮೋಹಗೊಂಡು ಓಡಿಹೋಗಿ ಯಾರುಯಾರಿಗೋ ಮೈಯನ್ನೊಪ್ಪಿಸಿ ಸಿನೇಮಾರಂಗದಲ್ಲಿ ಅಭಿನಯದಿಂದ ಕೀರ್ತಿ ಗಳಿಸಿದರೂ, ಹೃದಯ ಹಾಳಾಗಿ ತಿರುಗಿ ಮನೆಗೆ ಬಂದು ಗಂಡನ ಹೆಂಡತಿಯ ಕೈಯಲ್ಲಿ ಮಗುವನ್ನಿಟ್ಟು ಆಸು ನೀಗುವವಳು.

ನಾಟಕದ ತಂತ್ರವೂ ವಿಶಿಷ್ಟವಾಗಿದೆ. ಕತ್ತಲೆಯಾಗುವ ಸಮಯ. ಬರಿದಾದ ರಂಗಮಂಚಕ್ಕೆ ಬರುವವರು ಹೆಂಡತಿ-ಗಂಡ. ಅವರು ದೀಪ ಬೆಳಗಿಸುವುದು 'ಪರಿಣಾಮ'ವನ್ನು ಆರಂಭದಲ್ಲಿಯೇ ಸೂಚ್ಯವಾಗಿಡುತ್ತದೆ. ಗಂಡ ತನ್ನ ಮೊದಲ ಹೆಂಡತಿಯ ಭಾವಚಿತ್ರ ಪತ್ರಗಳನ್ನು ಅಡಗಿಸಿಟ್ಟಿರುವುದು, ಅವನ ಮರೆವು-ಹೆಂಡತಿಯ ಕೈಗೆ ಅವೆಲ್ಲ ಸಿಗುವುದು, ಅವನು 'ಬಾಸ್'ನ ಅಪ್ಪಣೆಯಂತೆ ಮತ್ತೆ ಕೆಲಸಕ್ಕೆ ಹೋಗಿಬರುವಷ್ಟರಲ್ಲಿ ಮನೆಯಲ್ಲಿ ಮೊದಲ ಹೆಂಡತಿಯ ಹೆಣ, ಅಳುತ್ತಿರುವ ಮಗು, ಶಕ್ತಿಯುತವಾದ ವಸ್ತುವಿಗೆ ಕಲಾತ್ಮಕ ರೂಪ ಬಂದಿದೆ ಇಲ್ಲಿ.

"ನಿಜವಾದ ದೇವತೆ ಇಲ್ಲಿ ಇರುವಾಗ, ನೀವು ಹಾಗೆ ಹೇಳಬಾರದು—ದೇವತೆ ಕೋಪಿಸಿಕೊಂಡಾಳು" ಎಂದು ಹೆಂಡತಿ ಮಗುವನ್ನು ಮುಂದೆ ಹಿಡಿದಾಗ, ಮಗು ಅಳತೊಡಗಲು 'ನಾನು ಹೇಳಲಿಲ್ಲವೇ ದೇವತೆಗೆ ಕೋಪ ಬಂತು. ಬೇಗ ಸ್ಟೋವ್ ಹಚ್ಚಿ ಹಾಲು ಕಾಯಿಸಬೇಕಾಗಿದೆ' ಎಂದು ನಾಟಕ ಮುಕ್ತಾಯವಾದ ಒಂದು ದಿವ್ಯಲೋಕದಲ್ಲಿ ಪ್ರವೇಶಮಾಡಿದ ಅನುಭವವಾಗುತ್ತದೆ. ನಿಜಕ್ಕೂ ಇದೊಂದು ಅದ್ಭುತ ಕಲಾಕೃತಿ. ಪಾತ್ರಗಳ ಉದಾತ್ತಗುಣಗಳು ನಮ್ಮನ್ನು ಚಕಿತಗೊಳಿಸುತ್ತವೆ.

'ಪಾಲು' ಎಂಬ ನಾಟಕದಲ್ಲಿ ಮನೆಯ ಯಜಮಾನ ತೀರಿಕೊಂಡಾಗ ಅಣ್ಣ ತಮ್ಮಂದಿರಲ್ಲಾಗ ಬೇಕಾದ ಪಾಲಿನ ವಿಷಯ. ಬರ್ನಾರ್ಡ್ ಗಿಲ್ಬರ್ಟ್‌ರ The old bull ನಾಟಕದ ಅನುಕರಣೆ. ಬಹುಮಾನ ಗೆಲ್ಲಬಲ್ಲ ಗೂಳಿಯ ಸುತ್ತಲೂ ಹೆಣೆದ ಅಣ್ಣ ತಮ್ಮಂದಿರ ಭಾವನೆಗಳು, ಕೆಂಚನ ಭಾವನೆಗಳನ್ನು ಎಳೆಎಳೆಯಾಗಿ ಬಿಚ್ಚಿಡುವ ನಾಟಕ. ಇಲ್ಲಿ ಸಂಭಾಷಣೆಯಲ್ಲೂ ಬಿಗುವಿದೆ. ನಾಟಕೀಯತೆಯೂ ಪರಿಣಾಮಕಾರಿಯಾಗಿದೆ.

ಅ. ನ. ಕೃ. ಅವರು ಕೆಲವುಬಾರಿ ತಮ್ಮ ವಿಚಾರಗಳಿಗೆ ಮೂರ್ತಸ್ವರೂಪಕೊಡಲು ನಾಟಕ ಕಾದಂಬರಿಗಳನ್ನು ಉಪಯೋಗಿಸಿಕೊಂಡಿದ್ದಾರೆ. 'ಜ್ವಾಲಾಮುಖಿ' ಅಂಥ ಒಂದು ನಾಟಕ. ಹಿಂದೀ ವಿರೋಧ ಚಳುವಳಿಯ ಮುಖಂಡರಾಗಿದ್ದ ಅ.ನ.ಕೃ. ಹಿಂದೀ ಭಾಷೆಯು ಅರಬನ ಒಂಟೆಯಂತೆ ಪ್ರವೇಶಮಾಡಿ ನಮ್ಮ ತಾಯ್ನುಡಿಯ ಕತ್ತು ಹಿಚುಕುತ್ತದೆ; ನಮ್ಮ

ಜನರಿಗೆ ಪರಭಾಷೆಯ ಮೋಹವನ್ನುಂಟುಮಾಡಿ ಮನೆಯನ್ನೇ ಮರೆಯು ತ್ತಾರೆಂದು ಚಿತ್ರಿಸಲು ಇಲ್ಲಿ ಪ್ರಯತ್ನಿಸಿದ್ದಾರೆ. ಪ್ರಚಾರವೇ ಪ್ರಧಾನವಾದ ಈ ನಾಟಕದಲ್ಲಿ ಶೈಥಿಲ್ಯ ಸಾಕಷ್ಟಿದೆ. ಸೀತಾ ಎಂಬ ಕನ್ನಡ ಹೆಣ್ಣು ಜ್ವಾಲಾಪ್ರಸಾದನೊಡನೆ (ಹಿಂದೀ ಪ್ರಚಾರಕ) ಓಡಿ ಹೋಗುವಲ್ಲಿ ನಾಟಕ ಮುಕ್ತಾಯ.

'ಆದದ್ದೇನು' ಹೆಣ್ಣು ಪಾತ್ರವೇ ಇಲ್ಲದ ಪ್ರಥಮ ಕನ್ನಡ ನಾಟಕ. ಅನ್ಯೋನ್ಯವಾಗಿರುವ ನಾಲ್ಕು ಅಣ್ಣತಮ್ಮಂದಿರಲ್ಲಿ ಒಡಕನ್ನುಂಟುಮಾಡಲು, ಆ ಮನೆತನಕ್ಕೆ ಅಪವಾದ ತರಲು ಪ್ರಯತ್ನಿಸುವ ದಾಯಾದಿ ಶ್ರೀಕಂಠಯ್ಯ ಹಾಗೂ ಊರ ದೊಡ್ಡಮನುಷ್ಯ ರಾಮಚಂದ್ರಯ್ಯ ಇವರ ಕುಟಿಲ ಇಲ್ಲಿಯ ವಸ್ತು. ಅಣ್ಣತಮ್ಮಂದಿರಲ್ಲಿ ಚಿಕ್ಕವನಾದ ಪೋಲಿಯಂತಿದ್ದ ರಾಜನ ಹಿರಿಯ ಗುಣಗಳನ್ನು ಅರಿತವರು ಶ್ಯಾಮಭಟ್ಟರು ಮಾತ್ರ. ರಾಜನ ಸಾವಿನಲ್ಲಿ ನಾಟಕ ಮುಕ್ತಾಯವಾಗುತ್ತದೆ. "ನಂಗೆ ಇರೋಕೆ ಆಸೆಯಿದೆ. ಆದ್ರೆ ಹೋಗೋದಕ್ಕೆ ಹೆದರಿಕೆಯಿಲ್ಲ" ಎನ್ನುವ ಒಂದು ಮಾತಿನಲ್ಲಿಯೇ ರಾಜನ ಹಿರಿಮೆಯನ್ನು ಮೂಡಿಸಲಾಗಿದೆ. ಪಾತ್ರಸೃಷ್ಟಿಯ ದೃಷ್ಟಿಯಿಂದ ಸುಂದರ ನಾಟಕ ಆದರೆ ಸಾಮಾಜಿಕ ಸಮಸ್ಯೆ ತೀರ ಸಾಮಾನ್ಯ ಎನ್ನಿಸು ವಂತಿದೆ.

ಸಾಮಾಜಿಕ ನಾಟಕಗಳಲ್ಲಿ ವಿಚಾರಪ್ರಧಾನ, ಸಮಸ್ಯಾಪ್ರಧಾನ, ಸಮಾಜ ಸುಧಾರಣೆಯ ಉದ್ದೇಶದ ಕೃತಿಗಳನ್ನು ಕೊಟ್ಟ ಅ.ನ.ಕೃ. 'ಹಿರಣ್ಯಕಶಿಪು' ಮತ್ತು 'ಸ್ವರ್ಣಮೂರ್ತಿ' ಗಳಲ್ಲಿ ಪೌರಾಣಿಕ ವ್ಯಕ್ತಿ, ವಸ್ತುಗಳನ್ನು ಬಳಸಿದ್ದಾರೆ. ಆದರೆ ಇಲ್ಲಿಯೂ ನಮ್ಮ ಕಾಲದ ವಿಚಾರ ಗಳನ್ನೇ ತುಂಬಿರುವುದು ಕಾಣುತ್ತದೆ. "ಪುರಾಣಕ್ಕೂ ಪುರಾಣದ ವಸ್ತುಗ ಳಿಗೂ ಯಾವ ಅರ್ಥ ಮಹತ್ವವುಂಟೋ ಅದನ್ನು ಈ ನಾಟಕ ಗಮನಕ್ಕೆ ತೆಗೆದುಕೊಂಡಿಲ್ಲ. ಯಾಕೆಂದರೆ ಇದನ್ನು ಬರೆದ ನಾನು ಪುರಾಣಪ್ರಿಯ-ನಾದರೂ ಪುರಾಣದೃಷ್ಟಿಪ್ರಿಯನಲ್ಲ. ಪುರಾಣಕಥೆ ಬೇರೆಯಾಗುವುದಕ್ಕೆ ಇಂದಿನ ಸಂಸ್ಕೃತಿ ದೃಷ್ಟಿಗಳೇ ಕಾರಣ. ಅಂದಿನ ಆಚಾರ ಇಂದಿನ ಅನಾ-ಚಾರ. ಇಂದಿನ ವಿಚಾರ ಅಂದಿನ ದೃಷ್ಟಿಯಲ್ಲಿ ಪ್ರಾಯಶಃ ಅವಿಚಾರವೇ ಆಗಬಹುದು" — ಇದು ಅ.ನ.ಕೃ ದೃಷ್ಟಿ

ಹಿರಣ್ಯಕಶಿಪು— ವಿಪ್ಲವ ಮೂರ್ತಿಯ ಚಿತ್ರ. ಸಂಧಿಕಾಲ. ಹೊಸದರ ಆಗಮನವನ್ನು ಸ್ವಾಗತಿಸಲಾಗದ ಜನಾಂಗ; ಹಳೆಯದನ್ನು ಸಹಿಸಲಾಗದ ಜನಾಂಗ ಇವುಗಳ ತಿಕ್ಕಾಟ........ ಇಂದಿನ ರಾಜಕೀಯ ಜೀವನದಲ್ಲಿ ಮೂಡುತ್ತಿರುವ ಆಶೆಗಳ ಪ್ರತೀಕವೇ 'ಹಿರಣ್ಯಕಶಿಪು' (ನಾಟಕ). —ಹೀಗೆ ಅರ್ಥಪೂರ್ಣವಾಗಿ ವಸ್ತುವನ್ನು ಬಳಸುವ ಬಯಕೆಯಲ್ಲಿ ನರಸಿಂಹ ಸಾಮಾನ್ಯ ಮಾನವನಾಗಿದ್ದಾನೆ. ರಾಜಕೀಯ ಪಟುವಾದ, ಕುಟಿಲ ಕಾರಸ್ಥಾನಗಳನ್ನೆಲ್ಲ ತಿಳಿದ ಮಂತ್ರಿ— ರಾಜಕಾರಣಿಯಾಗುತ್ತಾನೆ. ಪ್ರಹ್ಲಾದ ನಾನಾ ರೀತಿಯಲ್ಲಿ ಸಾವಿನಿಂದ ಪಾರಾಗುವುದು ದೈವೀ ಪವಾಡವಾಗದೆ ಮಂತ್ರಿಯ ಕಾರಸ್ಥಾನವಾಗುತ್ತದೆ. ಹಿರಣ್ಯಕಶಿಪುವಿನ ಕೊಲೆ ಯೋಜಿತ. ಅದಕ್ಕೆ ಯೋಜಕ ನರಸಿಂಹ, ತಿಳಿದೊ ತಿಳಿಯದೆಯೊ ಪ್ರಹ್ಲಾದ-ಕಯಾಧು ಪೋಷಕರು. ನಾಟಕದಲ್ಲಿ ಹಿರಣ್ಯಕಶಿಪುವನ್ನು ಎದುರಿಸಿ ಕೊಲ್ಲುವವ ನರಸಿಂಹ; ಅವನೂ ಕೊಲೆಯಾಗುತ್ತಾನೆ. ಹೊಸಯುಗದ ಆರಂಭವಾಗುತ್ತದೆ. ಇದು ಮಾತ್ರ ನಾಟಕದ ಉದ್ದೇಶವಾದಾಗ ಪುರಾಣದ ವ್ಯಕ್ತಿಗಳ ಕಲ್ಪನೆಯ ಬಗೆಗೆ ವ್ಯತ್ಯಾಸ ಬೇಕಾಗಿತ್ತೆ ಎನ್ನಿಸದೆ ಇರದು. ಈ ಚಿತ್ರಣಕ್ಕೆ ಬೇರೆ ವಸ್ತುವನ್ನು ಕಲ್ಪಿಸಿ ಪುರಾಣಪ್ರಿಯರಿಗೆ ನೋವನ್ನು ತಪ್ಪಿಸಬಹುದಿತ್ತು. ನಾಟಕ ಪ್ರಕಟವಾದಾಗ ಅಲ್ಪಸ್ವಲ್ಪ ಕ್ರಾಂತಿಕಾರಿ(?) ಎನ್ನಿಸಿರಬಹುದು. ಆದರೆ ಪುರಾಣವಸ್ತುವಿನ ಬಳಕೆ ಪರಿಣಾಮಕ್ಕೆ ತೀವ್ರತೆಯನ್ನು ಒದಗಿಸಿಲ್ಲ.

'ಸ್ವರ್ಣಮೂರ್ತಿ' ಯೊಂದು ಪಾಕಗೊಂಡ ಕೃತಿ. ಶ್ರೀರಾಮನು ಸೀತಾದೇವಿಯ ಸ್ವರ್ಣಮೂರ್ತಿಯನ್ನು ಮಾಡಿ ಅಶ್ವಮೇಧಯಾಗವನ್ನು ಮಾಡುವ ವಸ್ತು ಇಲ್ಲಿದೆ. ಸಾಂಕೇತಿಕತೆಯನ್ನು ನಾಟಕದುದ್ದಕ್ಕೂ ಉಳಿಸಿಕೊಂಡು ಮಾನವೀಯ ಗುಣ, ಭಾವ, ಸಂಬಂಧಗಳ ಸುಂದರ ಚಿತ್ರಣವನ್ನು ಇಲ್ಲಿ ಮೂಡಿಸಲಾಗಿದೆ. ಮಾನವೀಯತೆಯ ತಳಹದಿಯ ಮೇಲೆ ಪೌರಾಣಿಕ ಘಟನೆಯನ್ನು ಬಳಸಿ ಕಲಾತ್ಮಕತೆಯನ್ನು ತೋರಲಾಗಿದೆ. ಸೀತೆ ಕೊನೆಯಲ್ಲಿ ಇಲ್ಲದಾಗುವುದು ಅರ್ಥಪೂರ್ಣವಾಗಿದೆ. ರುದ್ರನಾಟಕದ ಛಾಯೆ ಕಾಣುತ್ತದೆ. ಇಲ್ಲಿ ಬರುವ ರಾಮ— ರಾಜಾರಾಮ. ರಾಮನ ಸೋದರ ಲಕ್ಷ್ಮಣ-ರಾಜಾಜ್ಞೆಯ ಪಾಲಕ ಲಕ್ಷ್ಮಣ, ನಿಷ್ಠುರತೆ ಕೋಮಲತೆಗಳ ಸಂಗಮಗಳಾದ ವ್ಯಕ್ತಿತ್ವದ ಸೀತೆ-ಊರ್ಮಿಳೆಯರು. ಕಂಚುಕಿ ೧—

ಕಂಚುಕಿ ೨ರ- ಮಾನವ ಸಹಜ ಭಾವಾಭಿವ್ಯಕ್ತಿ, ವಶಿಷ್ಠರ ಗರಿಮೆ— ಒಂದಕ್ಕಿಂತ ಒಂದು ಸುಂದರತೆಯನ್ನು ತೋರುತ್ತವೆ.

“ಸಾಮ್ರಾಜ್ಯ ರಥದ ಗಾಲಿಗಳು ಬಹು ದೊಡ್ಡವು. ಅದು ರಭಸದಲ್ಲಿ ಹೋಗುವಾಗ ಅನೇಕರು ಕೆಳಗೆ ಸಿಕ್ಕು ನುಚ್ಚುನೂರಾಗುತ್ತಾರೆ” ಎಂಬಲ್ಲಿ ರಾಮದರ್ಶನವಾದರೆ, “ರಾಮನೆಂದೂ ಆದರ್ಶಪತಿಯಾಗಲು ಸಾಹಸಪಡ ಲಿಲ್ಲ. ಆದರ್ಶ ಪ್ರಭುವಾಗಲು ಎಣಿಸಿದ್ದನು ಆ ಗುರಿಗೆ ಮಿಕ್ಕೆಲ್ಲವನ್ನೂ ಬಲಿದಾನವಾಗಿ ಅರ್ಪಿಸಿಬಿಟ್ಟಿದ್ದನು” ಎಂಬ ವಶಿಷ್ಠನ ಮಾತು ಕೊನೆಯ ತೀರ್ಪನ್ನು ನೀಡುತ್ತದೆ.

ಆದರೆ ರಾಮಾಯಣಕಾಲದ ಮನೋಭಾವ, ಕಾರ್ಯಪದ್ಧತಿ, ನಡ- ವಳಿಕೆ ಇಲ್ಲಿ ಕಾಣದು. ಪುರಾಣಕಾಲದ ವ್ಯಕ್ತಿ-ಘಟನೆಗಳನ್ನು ಆಧರಿಸಿದ ಕೃತಿಗಳಲ್ಲಿ ಆ ಕಾಲದ ವಾತಾವರಣ ವಿಚಾರಸರಣಿಗಳಿಗೆ ಅಪಚಾರವಾಗ ಬಾರದಷ್ಟೇ ?

ಅ.ನ.ಕೃ. ಅನುಗ್ರಹ, ರಾಜನರ್ತಕಿ ಎಂಬ ಎರಡು ಚಿಕ್ಕನಾಟಕ ಗಳನ್ನೂ ರಾಷ್ಟ್ರವೀರ ಬೆಂಗಳೂರು ಕೆಂಪೇಗೌಡ, ಜಗಜ್ಯೋತಿ ಬಸವೇಶ್ವರ, ರಜಪೂತಲಕ್ಷ್ಮಿ ಎಂಬ ಐತಿಹಾಸಿಕ ದೊಡ್ಡ ನಾಟಕಗಳನ್ನೂ ಬರೆದಿದ್ದಾರೆ.

‘ಅನುಗ್ರಹ’ ಬುಕ್ಕರಾಯನ ಕಾಲದ ರಾಜಕೀಯ ಘಟನೆಗಳನ್ನಾಧ ರಿಸಿದ ನಾಟಕ. ಇಲ್ಲಿ ಬೇಡರ ನಾಯಕನಾದ ಚನ್ನನಾಯಕನ ಶೌರ್ಯ ಸಾಹಸ, ಮಾನವೀಯತೆ, ರಾಜಭಕ್ತಿಗಳ ಚಿತ್ರಣವಿರುವುದು ಮತ್ತು ಚೆಲುವ ರಂಗರಾಯನ ಸಾಹಸ ಶೌರ್ಯಗಳ ಚಿತ್ರವಿರುವುದು ಅಲ್ಲದೆ ಬುಕ್ಕರಾಯನ ಪುತ್ರವಾತ್ಸಲ್ಯ, ಮನದ ಆತಂಕಗಳನ್ನು ಕೌಶಲಪೂರ್ಣವಾಗಿ ಚಿತ್ರಿಸಲಾಗಿದೆ. ಇದನ್ನು ನಾಟಕ ಎನ್ನುವುದಕ್ಕಿಂತ ಸುಂದರ ಸಂಭಾಷಣೆಗೆ ಒಂದು ಮಾದರಿ ಎನ್ನಬಹುದು.

‘ರಾಜನರ್ತಕಿ’ ಉತ್ತರ ಭಾರತ, ದಕ್ಷಿಣಭಾರತಗಳಲ್ಲಿ ಅವ್ಯಾಹತ ವಾಗಿ ನಡೆದಿರುವ ಸಂಸ್ಕೃತಿಯ ಕೊಡುಕೊಳ್ಳುವಿಕೆಯ ಚಿತ್ರವಿದೆ. ಇಲ್ಲಿ ಬರುವ ಐತಿಹಾಸಿಕ ಪಾತ್ರಗಳಾದ ಶ್ರೀಹರ್ಷ, ಪುಲಿಕೇಶಿಯರ ಘನತೆ,

ಮಾಧುರಿ (ನರ್ತಕಿ)–ವಸುಕೀರ್ತಿ (ಮಹಾಶಿಲ್ಪಿ)ಗಳ ಕೋಮಲ ಭಾವಗಳ ವಿಕಾಸ, ಅವರು ನಂಬಿದ ರಾಜಸೇವೆ, ತ್ಯಾಗ, ಮಧುರ ಪ್ರೀತಿ– ಅದಕ್ಕೆ ರಾಜಗೌರವ ಎಲ್ಲವೂ ಹೃದ್ಯವಾಗಿ ಮೂಡಿವೆ. ಇದೊಂದು ನಾಟಕ ರೂಪದಲ್ಲಿ ಮೂಡಿದ ಭಾವಗೀತೆ.

ಬೆಂಗಳೂರಿನ ಕೆಂಪೇಗೌಡನ ಜೀವನದ ಒಂದು ಘಟನೆಯನು ಆಧರಿಸಿದ ಕಲಾತ್ಮಕ ನಾಟಕವಿದು. ವಿಜಯನಗರದ ಅರಸುಮನೆತನದ ಕೊನೆಯ ಹಂತದ ಚಿತ್ರಣವಿದು. ಕೋಟೆಯ ಗೋಡೆ ನಿಲ್ಲಿಸಲು ಗರ್ಭಿಣಿ ಸೊಸೆಯನ್ನೇ ಬಲಿಕೊಟ್ಟ ಚಿತ್ರಗಳೆಲ್ಲ ಇಲ್ಲಿವೆ. ಐತಿಹಾಸಿಕ ವಸ್ತುವಿನಲ್ಲಿಯ ನಾಟಕೀಯ ಅಂಶಗಳನ್ನು ಕೌಶಲಪೂರ್ಣವಾಗಿ ಬಳಸಿಕೊಂಡುದನ್ನು ಇಲ್ಲಿ ಕಾಣುತ್ತೇವೆ. ಇದು ದೇಶಾಭಿಮಾನವನ್ನು ಬೆಳೆಸುವ ಕುಶಲಕಲಾಕೃತಿಯಾಗಿದೆ.

ಬಸವಣ್ಣನವರ ವಚನಗಳ ಅಭ್ಯಾಸ, ವಿವಿಧ ಕಾವ್ಯಗಳಲ್ಲಿ ಮೂಡಿರುವ ಅಣ್ಣನ ಘನವಾದ ವ್ಯಕ್ತಿತ್ವಗಳಿಂದ ಪ್ರಭಾವಿತರಾಗಿ ಬಹುದೀರ್ಘವಾದ, ವೈಶಿಷ್ಟ್ಯಪೂರ್ಣವಾದ 'ಜಗಜ್ಜ್ಯೋತಿ ಬಸವೇಶ್ವರ' ನಾಟಕ ರಚಿಸಿದರು. "ಸಿಂಗಿರಾಜಾದಿ ಕವಿಗಳಿಂದ ದೊರೆಯುವ ಕೆಲ ವಿಷಯಗಳ ಜೊತೆಗೆ, ಬಸವಣ್ಣನವರ ವಚನಗಳಿಂದ ಊಹಿಸಬಹುದಾದ ವಿಷಯಗಳನ್ನು ಸೇರಿಸಿ ಒಂದು ಚಿತ್ರವನ್ನು ರಚಿಸಲು ನಾನು ಯತ್ನಿಸಿದ್ದೇನೆ. ಬಸವಣ್ಣನವರು ವೀರಶೈವ ಸಮಾಜಕ್ಕೆ ಮಾತ್ರವೇ ಅಲ್ಲ. ಇಡಿಯ ಲೋಕಕ್ಕೆ ಮಾಡಿದ ಉಪಕಾರವೇನು, ನೀಡಿದ ಕಾಣಿಕೆಯೇನು, ಕೊಟ್ಟ ಸಂದೇಶ ಯಾವುದು ಎಂಬ ವಿಚಾರ ಮಾಡಿದ್ದೇನೆ. ನಾನು ನೋಡುವ ಬಸವೇಶ್ವರ. ಪುರಾಣಕಾರರು ಕಾಣಿಸಿರುವ ಪರಮತಭರ್ತ್ಸನಾಪ್ರಿಯನೂ, ಕಟುಧರ್ಮಿಯೂ, ಜಾತ್ಯಾಂಧನೂ ಆದ ಬಸವೇಶ್ವರನಲ್ಲ. ದಯೆಯ, ಸಹನೆಯ, ಸಂಯಮದ, ತ್ಯಾಗದ ತಿರುಳನ್ನು ಎತ್ತಿ ತೋರಿ ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಬಸವೇಶ್ವರ." — ಇದು ಅ. ನ. ಕೃ. ನಿಲುವು. ಬಿಜ್ಜಳನ ಬಗೆಗೂ ವೈಶಿಷ್ಟ್ಯಪೂರ್ಣವಾದ ದೃಷ್ಟಿ. ಬಸವ–ಬಿಜ್ಜಳರ

ಸಂಬಂಧ ನಿಕಟವಾದುದು; ಮಧುರವಾದುದು....... ಎಲ್ಲರನ್ನೂ ಮೆಚ್ಚಿಸುವ ಭರದಲ್ಲಿ ಬಿಜ್ಜಳ ತನ್ನ ಮೃತ್ಯುವನ್ನು ತಾನೇ ಆಹ್ವಾನಿಸಿದ.

ಈ ಹಿನ್ನೆಲೆಯಲ್ಲಿ ಮೂಡಿರುವ ನಾಟಕವು ಬಸವಣ್ಣನವರ ಜೀವನವನ್ನು ಕಣ್ಣುಮುಂದೆ ನಿಲ್ಲಿಸುತ್ತದೆ. ಆದರೆ ಐವತ್ತಕ್ಕೂ ಮಿಕ್ಕಿರುವ ಪಾತ್ರಗಳು, ದೃಶ್ಯಗಳ ವಿಪುಲತೆ ರಂಗಕ್ಕೆ ಈ ನಾಟಕವನ್ನು ತರಲು ಆತಂಕಗಳಾಗುತ್ತವೆ.

"ರಜಪೂತಲಕ್ಷ್ಮಿ" ಕಲಾಪೂರ್ಣವಾಗಿ, ತುಂಬ ಯಶಸ್ವಿಯಾಗಿ ಮೂಡಿ ಬಂದಿರುವ ಐತಿಹಾಸಿಕ ನಾಟಕ. ಅಕ್ಬರ ಕಾಲದ ಹಿಂದೂ–ಮುಸ್ಲಿಮ್ ಸಂಸ್ಕೃತಿಗಳಲ್ಲಿಯ ಘರ್ಷಣೆ, ಸಮ್ಮಿಳನಗಳನ್ನು ಕೌಶಲಪೂರ್ಣವಾಗಿ ಹೊಂದಿಸಲಾಗಿದೆ. 'ಸಂಸ್ಕೃತಿಗಳ ಸಮ್ಮಿಳನಕ್ಕೆ ಮುಂಚೆ ಘರ್ಷಣೆ ಅನಿವಾರ್ಯ' ಎಂಬ ತತ್ತ್ವವನ್ನು ಒಪ್ಪಿ ಈ ನಾಟಕ ರೂಪುಗೊಂಡಿದೆ. ಅಕ್ಬರನ ನಂತರ ರಾಜಸಲ್ಲಿಯೂ ಇದ್ದಿರಬಹುದಾದ ಕುಟಿಲ, ಮೋಸಗಳ ಚಿತ್ರಣ, ಯೋಷಿ, ಅತ್ಮರ್ ಇವರಂತಹ ಎರಡು ಬೇರೆ ಬೇರೆ ಧರ್ಮಗಳಲ್ಲಿ ನಿಷ್ಠೆ ಇದ್ದೂ ಪರಸ್ಪರ ಧರ್ಮಗಳಲ್ಲಿಯ ವ್ಯಕ್ತಿಗಳಲ್ಲಿಯ ಹಿರಿಮೆಗೆ ಗೌರವವನ್ನು ತೋರುವ ಮನೋಧರ್ಮ ಅದ್ಭುತವಾಗಿ ಮೂಡಿದೆ ನಾಟಕದ ಕೊನೆಯಲ್ಲಿ ನಡೆಯುವ ಅತ್ಮಾರ್, ಲಕ್ಷ್ಮಣ, ತಾರಾ ಮೊದಲಾದವರ ಆತ್ಮಾರ್ಪಣೆ ನಾಟಕಕ್ಕೆ ದಿವ್ಯತೆಯನ್ನು ಒದಗಿಸುವುದಲ್ಲದೆ, ಪರಿಣಾಮಕ್ಕೆ ಮೊನಚನ್ನುಂಟು ಮಾಡುತ್ತದೆ.

ರಾಜದ್ರೋಹ, ಸ್ವಾಭಿಮಾನ ಮೊದಲಾದವುಗಳ ಚಿತ್ರಣವೂ ಇದೆ. ಇದೊಂದು ಬಿಗಿ, ಮೊನಚು, ಕಲಾತ್ಮಕತೆಗಳನ್ನೊಳಗೊಂಡ ಯಶಸ್ವಿಯಾದ ಕೃತಿ.

( ಅ.ನ.ಕೃ. ಅವರ ನಾಟಕಗಳು, ಕ್ರಾಂತಿಕಾರಿ, ವಿಚಾರ ಪ್ರಚೋದಕ, ದೇಶಾಭಿಮಾನ ಬೆಳೆಸುವಂಥವು. ಪಾತ್ರ ಪೋಷಣೆ, ಸನ್ನಿವೇಶ ನಿರ್ಮಾಣಗಳಲ್ಲಿ ಅವರದು ಎತ್ತಿದ ಕೈ.)

ಕಾದಂಬರಿ ಸಾರ್ವಭೌಮರಾಗಿ ಕನ್ನಡಿಗರ ಹೃದಯದಲ್ಲಿ ಸ್ಥಾನ ಪಡೆಯಬೇಕೆಂದೇ ದೈವ ನಿರ್ಧರಿಸಿರಬೇಕು. ಅವರ ನಾಟಕ ಸೃಷ್ಟಿ ನಡುವೇ

ನಿಂತಿತು. ಇಂದಿನ ಹೊಸ ಅಲೆಯ ಯುಗದಲ್ಲಿ, ಹೊಸ ಹೊಸ ಪ್ರಯೋಗಗಳಿಗೆ ಅ.ನ.ಕೃ. ಮನಸ್ಸು ಮಾಡಿದ್ದರೆ, ಇನ್ನೊಂದು ರೋಮಾಂಚಕ ಯುಗವೇ ಕಣ್ಣು ತೆರೆಯುತ್ತಿತ್ತು.

(ನಾಟಕ ಸಾಹಿತ್ಯದಲ್ಲಿ ೧೯೨೦ ರಿಂದ ೧೯೭೦ ರ ವರೆಗಿನ ಅರ್ಧ ಶತಮಾನದಲ್ಲಿ ಕೃಷಿ ಮಾಡಿದ ಸಾಹಿತ್ಯಿಕರಲ್ಲಿ ಅ.ನ.ಕೃ. ಸ್ಥಾನ ಸಣ್ಣದಲ್ಲ. ಇನ್ನೂ ಅಭ್ಯಾಸ ನಡೆಯಬೇಕಾಗಿದೆ. ಒಂದೊಂದು ಕೃತಿಯನ್ನು ವಿವೇಚಿಸುವ ಗ್ರಂಥಗಳ ನಿರ್ಮಾಣ ಆಗಬೇಕು.)

ಕಾದಂಬರಿಕಾರ ಅ.ನ.ಕೃಗೆ ನಾಟಕಕಾರ ಅ.ನ.ಕೃ. ಕಡಿಮೆಯಾಗಿಲ್ಲ. ಗಾತ್ರ ಚಿಕ್ಕದಿರಬಹುದು ನಿಲುವು ಅದೇ ಎತ್ತರದ್ದು. ಸಂಭಾಷಣೆ ಕರತಲಾಮಲಕವಾಗಿದ್ದ ಅ.ನ.ಕೃ. ನಾಟಕದಲ್ಲಿ ಜೇನಿಳಿಸುವುದು ಸುಲಭವಾಗಿತ್ತು. ಅಂತೆಯೆ ಬರೆದ ಒಂದೊಂದು ಏಕಾಂಕ ಒಂದೊಂದು ನಾಟಕ ಪೂರ್ಣತೆಯನ್ನು ಪಡೆದಿವೆ, ಕಲಾತ್ಮಕವಾಗಿವೆ.

— —

# ಕನ್ನಡ ಕಾದಂಬರಿ ಸಾಹಿತ್ಯಕ್ಕೆ ಅ.ನ.ಕೃ. ಕೊಡುಗೆ

–ಕೃಷ್ಣಮೂರ್ತಿ ಪುರಾಣಿಕ

ಕನ್ನಡ ಕಾದಂಬರಿ ಇಪ್ಪತ್ತನೆಯ ಶತಮಾನದ ಕೂಸೆಂದು ಧಾರಾಳವಾಗಿ ಹೇಳಬಹುದು. ಈ ಕೂಸನ್ನು ಮೊದಲು ಬೆಳೆಯಿಸಿದವರು ಚಿರಸ್ಮರಣೀಯರಾದ ಬಿ. ವೆಂಕಟಾಚಾರ್ಯರು; ಗಳಗನಾಥರು. ಬಿ. ವೆಂಕಟಾಚಾರ್ಯರು ಬಂಕಿಮಚಂದ್ರ ಚಟ್ಟೋಪಾಧ್ಯಾಯರ ಬಂಗಾಳಿ ಕೃತಿಗಳನ್ನೂ, ಶ್ರೀ ಗಳಗನಾಥರು ಹರಿನಾರಾಯಣ ಆಪ್ಟೆ ಅವರ ಮರಾಠೀ ಕೃತಿಗಳನ್ನು ಅನುವಾದ ಮಾಡಿದವರು. ಈ ಇಬ್ಬರೂ ಮಹನೀಯರು ಸ್ವತಂತ್ರ ಕಾದಂಬರಿಕಾರರಲ್ಲದಿದ್ದರೂ (ಒಂದೆರಡು ಸ್ವತಂತ್ರ ಕಾದಂಬರಿಗಳನ್ನು ಬರೆದಿದ್ದಾರೆ) ಇವರ ಕಾದಂಬರಿಗಳಿಂದ ಕನ್ನಡಿಗರಲ್ಲಿ ಓದುವ ಹಂಬಲ; ವಾಚನಾಭಿರುಚಿ ಬೆಳೆಯಿತೆಂಬುದು ನಿರ್ವಿವಾದ. ಈ ಭಾಷಾಂತರ ಬಲವಿರುವ ಯುಗದಲ್ಲಿ ಎಂ. ಎಸ್. ಪುಟ್ಟಣ್ಣನವರು 'ಮಾಡಿದ್ದುಣ್ಣೋ ಮಹಾರಾಯ' 'ಮುಸುಕು ತೆಗೆಯೆ ಮಾಯಾಂಗನೆ' ಎಂಬ ಸ್ವತಂತ್ರ ಕೃತಿಗಳನ್ನು ರಚಿಸಿದರು. ಕೆರೂರು ವಾಸುದೇವಾಚಾರ್ಯರ 'ಇಂದಿರಾ' ಕಾದಂಬರಿ ಉತ್ತರ ಕರ್ನಾಟಕದ ಜನಜೀವನವನ್ನು ಚಿತ್ರಿಸಿದ ಸ್ವತಂತ್ರ ಕಾದಂಬರಿ.

ಪ್ರಗತಿಶೀಲ ಚಳುವಳಿಯ ಪರಿಣಾಮವಾಗಿ 'ಸಾಮಾಜಿಕ ಪರಿಜ್ಞಾನ ಸಾಹಿತ್ಯ'ದ ಅರಿವು ಮೂಡಿ, ಕಾದಂಬರಿಯು ಜನತೆಯ ದುಃಖ, ಸಮಸ್ಯೆಗಳನ್ನು ಪರಿಹರಿಸಬಲ್ಲ ಸಾಧನವೂ ಆಗಬೇಕೆಂಬ ತತ್ವವನ್ನು ಕಾದಂಬರಿಕಾರರಲ್ಲಿ ಅನೇಕರು ಸ್ವೀಕರಿಸಿ ಸಾಹಿತ್ಯ ನಿರ್ಮಾಣಕ್ಕೆ ತೊಡಗಿದರು. ಇವರಿಂದ ಕಾದಂಬರಿಸಾಹಿತ್ಯದ ಕ್ಷೇತ್ರವು ವಿಶಾಲವಾಯಿತು. ಅನೇಕ ಉತ್ತಮ ಕಾದಂಬರಿಕಾರರೆಂದು ಆಮೇಲೆ ಪ್ರಖ್ಯಾತರಾದವರನ್ನು ಬೆಳಕಿಗೆ ತಂದಿತು ಪ್ರಗತಿಶೀಲ ಕಾಲ.

೧೯೪೭ರಿಂದ ಉಂಟಾದ ಸ್ವಾತಂತ್ರ್ಯಪ್ರಭೆ ಸಾಹಿತ್ಯಲೋಕದ ಮೇಲೂ ತನ್ನ ಬೆಳಕನ್ನು ಬೀರಲಾರಂಭಿಸಿತು.

ಈ ಕಾಲದ ಸಾಹಿತ್ಯವನ್ನು ಕಾದಂಬರಿ ಹೆಚ್ಚಾಗಿ ಕಬಳಿಸಿತೆಂದೇ ಹೇಳಬೇಕು. ಉಳಿದ ಸಾಹಿತ್ಯ ಪ್ರಕಾರಗಳಲ್ಲಿ ಅಷ್ಟಾಗಿ ಕಂಡುಬರದ ಉತ್ಸಾಹ, ಸಿದ್ಧಿ ಕಾದಂಬರಿಯಲ್ಲಿ ಕಂಡು ಬಂದಿತು. ಕಾರಂತ, ತ.ರಾ.ಸು. ಅ.ನ.ಕೃ. ಬಸವರಾಜ ಕಟ್ಟೀಮನಿ, ಕೃಷ್ಣಮೂರ್ತಿ ಪುರಾಣಿಕ, ಮಿರ್ಜಿ ಅಣ್ಣಾರಾಯ, ತ್ರಿವೇಣಿ, ನಿರಂಜನ, ಅನುಪಮಾ, ವ್ಯಾಸರಾವ ಬಲ್ಲಾಳ್, ಕೆ. ವಿ. ಅಯ್ಯರ್, ಇನಾಮದಾರ, ಮಾಸ್ತಿ, ಕುವೆಂಪು ಮೊದಲಾದ ಲೇಖಕರು ಕಾದಂಬರಿ ಸಾಹಿತ್ಯದ ಬೆಳವಣಿಗೆಯನ್ನು ಗಣನೀಯವಾಗಿ ಹೆಚ್ಚಿಸಿದರು.

## ಕಾದಂಬರಿ ಅನಂತಮುಖಿಯಾದ ಶಾರದೆ

ಇಂದು ಕಾದಂಬರಿ ಪ್ರಪಂಚ ವಿಸ್ತಾರವಾಗಿದೆ. ಯಾಕಂದರೆ ಜೀವನ ವಿಸ್ತಾರ ಹಾಗೂ ವೈವಿಧ್ಯ ಇದಕ್ಕೆ ಕಾರಣವಾಗಿದೆ ಇಂದು ಕಾದಂಬರಿ ಬೆಳವಣಿಗೆ ತಂತ್ರದಲ್ಲಿ, ಕಥಾವಸ್ತುವಿನಲ್ಲಿ, ವೈವಿಧ್ಯವನ್ನು ತುಂಬಿಕೊಂಡು ವಿಜೃಂಭಿಸತೊಡಗಿದೆ. ವೈವಿಧ್ಯಪೂರ್ಣವಾದ ಮಾನವ ಜೀವನವನ್ನು ಚಿತ್ರಿಸುವ ಕಾದಂಬರಿ ಹಾಗಾಗಬೇಡವೆ?

ಕಾದಂಬರಿ ಕೂಸಿಗೆ ಸಮಾಜವೇ ತಾಯಿ. ಅದೇ ತಾಯಿಬೇರು. ಪ್ರಜಾಪ್ರಭುತ್ವ ಪದ್ಧತಿಯಲ್ಲಿ ಸಾಮಾನ್ಯ ಜೀವನದಲ್ಲಿ ತಿಳುವಳಿಕೆಯನ್ನು ಮೂಡಿಸಲು ಕಾದಂಬರಿ ಸಮರ್ಥವಾಗಿದೆ. ಪ್ರಜ್ಞೆಯ ತಿಳುವಳಿಕೆಯಲ್ಲಿಯೇ ಪ್ರಜಾಪ್ರಭುತ್ವದ ಯಶಸ್ಸನ್ನು ಗುರುತಿಸಿದ ಕಾದಂಬರಿಕಾರನು ಅದಕ್ಕಾಗಿ ಹೋರಾಟ ಸಾಗಿಸಿದ್ದಾನೆ. ರಾಜಕಾರಣಿ ಮುಗ್ಗರಿಸಿದಲ್ಲಿ ಕಾದಂಬರಿಕಾರ ಮುಂದುವರಿದಿದ್ದಾನೆ.

ಸ್ವಾತಂತ್ರ್ಯೋತ್ಸವದ ಈ ಕಾಲದಲ್ಲಿ ಹೊಸ ಪ್ರಜ್ಞೆಯು ಹೊಸ ಹೊಸ ಸಂವೇದನೆಗಳನ್ನು ಮಿಡಿಯುತ್ತದೆ.

ಆದುದರಿಂದಲೇ ಕಾದಂಬರಿ ಸಾಹಿತ್ಯವು ಜನಜೀವನ ಜೀವಂತವಾಣಿಯಾಗಿ ಪುಷ್ಟಿಯಾಗತೊಡಗಿದೆ.

ತಂತ್ರದಲ್ಲಿ ಸಾಫಲ್ಯ ಬಂದಿದೆ. ಕಾದಂಬರಿಯ ಬೆಳವಣಿಗೆಯ ದೃಷ್ಟಿಯಿಂದ ಇದೊಂದು ಮೈಲುಗಲ್ಲು. ಸಾಮಾಜಿಕ, ವೈಯಕ್ತಿಕ, ಜೀವನದ ಬಗ್ಗೆ ಅನ್ನಿಸುವ ತೀವ್ರವಾದ ವೈಫಲ್ಯಭಾವವು ಸ್ವಾತಂತ್ರ್ಯೋತ್ತರದ ಈ ಸಮಯದಲ್ಲಿ ಹೊಸ ಹೊಸ ಸಾಹಿತ್ಯ ಪರಿಸರಕ್ಕೆ ಅನುವು ಮಾಡಿಕೊಟ್ಟಿದೆ. ನಮ್ಮ ಸಾಮಾಜಿಕ ಜೀವನದಲ್ಲಿ ಬಂದ ಸ್ವಾರ್ಥಮನೋವೃತ್ತಿ, ಕೊಳೆ, ಕಸ, ಅದೂರದೃಷ್ಟಿ, ರಾಜಕೀಯ ಜೀವನದಲ್ಲಿ ಬಂದ ಹೊಲಸು ರಾಡಿ, ಅಸ್ತವ್ಯಸ್ತತೆ, ಹೊಣೆಗೆಟ್ಟ ನಡತೆ ಇವೆಲ್ಲ ಕಾದಂಬರಿ ಲೇಖಕನ ಮನಸ್ಸಿನ ಮೇಲೆ ಬಿದ್ದು ಸುತ್ತಿಗೆಯ ಪೆಟ್ಟುಗಳಾಗಿ ವೈಫಲ್ಯಭಾವದ ಪ್ರತಿಕ್ರಿಯೆಗಳನ್ನು ಉಂಟು ಮಾಡತೊಡಗಿವೆ. ಆದುದರಿಂದ ಕಾದಂಬರಿ ಸಾಹಿತ್ಯ ಪ್ರಭೇದದಲ್ಲಿ ಚಿಂತನಶೀಲತೆ, ಬುದ್ಧಿವಂತಿಕೆ ಬೇಕಾದಷ್ಟು ಕಾಣತೊಡಗಿವೆ.

ಪ್ರಜಾಪ್ರಭುತ್ವ ಪದ್ಧತಿಯಲ್ಲಿ ಕೋಳಿಯಾಗಿ ಬಂದ ಜಾತಿ ಮತ ಪಂಥಗಳ ಕಾಲ್ತೊಡಕಿನ ಎಳೆದಾಟವನ್ನು ಇಂದಿನ ಕಾದಂಬರಿಕಾರನು ಕಥಾಸೃಷ್ಟಿಯಲ್ಲಿ ತೋರಿಸಿ ಜೀವನಕ್ಕೊಂದು ಸಂಸ್ಕಾರವನ್ನು ಕೊಡತೊಡಗಿದ್ದಾನೆ. ಜನಸೇವೆಯೇ ಆರಾಧನೆಯೆಂಬುದನ್ನು ಅದ್ಭುತವಾಗಿ ಕಥಾಸೃಷ್ಟಿಯಲ್ಲಿ ಮೂಡಿಸತೊಡಗಿದ್ದಾನೆ.

ಜೀವನಕ್ಕೆ ಕನ್ನಡಿ ಹಿಡಿದು ಜೀವನದ ಮಹತಿಯನ್ನು ತೋರಿಸತೊಡಗಿದ್ದಾನೆ.

ಶಾರದೆಗೆ ಜಾತಿಭೇದವಿಲ್ಲ; ಆದುದರಿಂದ ಸಾಹಿತಿಗೂ ಜಾತಿಭೇದವಿಲ್ಲ. ಜೀವನವೇ ಸಾಹಿತ್ಯ ಅಂದಬಳಿಕ ಜೀವನದ ಬಣ್ಣದಲ್ಲಿ ಯಾವ ಜಾತಿಭೇದವಿದೆ?

ಇದು ಸ್ವಾತಂತ್ರ್ಯೋತ್ತರ ಕಾದಂಬರಿಕಾರನ ಹೊಸ ಉಸಿರು; ಹೊಸ ಸಂಜೀವಿನಿ.

## ಸಾಮಾಜಿಕ ಕಾದಂಬರಿ ಪಟ್ಟದ ರಾಣಿ

ಕಾದಂಬರಿ ಪ್ರಪಂಚದಲ್ಲಿ ಬೇಕಾದಷ್ಟು ವಸ್ತು ವೈವಿಧ್ಯ ಕಂಡು ಬರುತ್ತದೆ. ಆದರೆ ಸಾಮಾಜಿಕ ಕಾದಂಬರಿಯೆ ಇಂದಿನ ಪಟ್ಟದ ರಾಣಿ. ಈ

ಕಾದಂಬರಿಗಳು ಸದ್ಯದ ಬೆಳವಣಿಗೆಯಲ್ಲಿ ತಂತ್ರದೃಷ್ಟಿಯಿಂದ ನವೀನವಾಗಿವೆ, ವಿವಿಧವಾಗಿವೆ. ಹೆಚ್ಚು ಶುದ್ಧವೂ ಆಗಿವೆ. ಸಾಮಾನ್ಯವಾಗಿ ಹೇಳುವುದಾದರೆ, ಮುಖ್ಯವಸ್ತು ಪ್ರಮುಖ ವ್ಯಕ್ತಿಗಳು, ಇವುಗಳ ಮೇಲೆ ಬೆಳಕನ್ನು ಕೇಂದ್ರೀಕರಿಸಿ ಉಳಿದೆಲ್ಲವನ್ನೂ ಅವುಗಳಿಗೆ ಅಧೀನಗೊಳಿಸುವ 'ಪ್ರಮಾಣಜ್ಞಾನ, ಕಲಾವಂತಿಕೆ ಇಂದಿನ ತಂತ್ರದಲ್ಲಿ ಪ್ರಮುಖ ಗುಣವಾಗಿದೆ. ಅನಾವಶ್ಯಕಸಂಗತಿ, ಪಾತ್ರಗಳು, ಅಧಿಕಪ್ರಸಂಗದ ವರ್ಣನೆ, ಶೈಲಿಯ ಆಡಂಬರ ಇಂದಿಗೆ ತ್ಯಾಜ್ಯ, ಪ್ರತಿಭೆಯ ಓಟಕ್ಕೆ ನಿಗ್ರಹದ, ವಿವೇಕದ ಕಡಿವಾಣ ಹಾಕುವದೇ ಇಂದಿನ ಕಾದಂಬರಿಯ ಗೊತ್ತುಗುರಿ. ನೂರಾರು ಅಪೂರ್ಣ ವ್ಯಕ್ತಿಗಳ ಸಂತೆ ನೆರೆಸುವದಕ್ಕಿಂತ, ಕೇಂದ್ರ ವ್ಯಕ್ತಿಗಳ ಸಂಪೂರ್ಣ ಪೃಥಕ್ಕರಣಕ್ಕೇ ಹೊಸ ಕಾದಂಬರಿಕಾರರು ಹಾತೊರೆಯುತ್ತಾರೆ. ಆದುದರಿಂದ ಕಾದಂಬರಿ ಪ್ರಪಂಚದಲ್ಲಿ ಸೂಕ್ಷ್ಮ ಮನೋವಿಜ್ಞಾನಕ್ಕೆ ಬಹಳ ಬೆಲೆ ಬಂದಿದೆ. 'ಸಂವಿಧಾನೈಕ್ಯ' ಸಮಬಂಧ ಪಾತ್ರಸುಸಂಗತಿ ಪೃಥಕ್ಕರಣ ಇವುಗಳಿಂದ ಕೂಡಿದ ಬುದ್ಧಿ ಗ್ರಾಹ್ಯವಾದ ಕಲೆಯೇ ಹೊಸ ತಂತ್ರದ ಸಾರವೆಂದು ಹೇಳಬಹುದು.

ಇಂದಿನ ಕಾದಂಬರಿಗಳಲ್ಲಿ ಇದ್ದ ಸಮಾಜವನ್ನು ಕಂಡ ರೀತಿ ಹೊಸ ಸಮಾಜ ಹೇಗಿರಬೇಕೆಂಬ ನೀತಿ ಇವು ಒಂದು ಆಳವಾದ ವ್ಯಕ್ತಿತ್ವದ ತೇಜದಿಂದ ಕಲೆಯ ಕಾಂತಿಯಿಂದ ಬಣ್ಣಗೊಂಡು ತೋರತೊಡಗಿವೆ.

## ಅನುಭವ ವಿಸ್ತಾರ

ಕಾದಂಬರಿಯ ವಸ್ತುವಿನ ಆಯ್ಕೆಗೆ ಕಾದಂಬರಿಕಾರನ ವ್ಯಕ್ತಿತ್ವವೇ ಕಾರಣವಾಗಿರುತ್ತದೆ. ಅವನ ಘನತೆ ಕೆಲಸ ಮಾಡುತ್ತದೆ. ಅವನ ಸಂಸ್ಕಾರ ಸಂಸ್ಕೃತಿ, ರುಚಿ—ಶುಚಿಗಳು ಇದನ್ನು ಒದಗಿಸುತ್ತವೆ. ಹೀಗೆ ಬರೆ ಎಂದು ಯಾರೂ ಆಜ್ಞೆ ಮಾಡಲಾರರು. ಕಾದಂಬರಿಕಾರನ ಹೃದಯವು ಅವನ ಕೃತಿಗಳಲ್ಲಿ ಮೂಡುತ್ತದೆ. ಅವನ ಪರಿಸರ ಅಚ್ಚೊತ್ತಿ ಮೂಡುತ್ತದೆ. ನಿಸರ್ಗವು ಮಾನವ ಜೀವನಕ್ಕೆ ದೂರವಿರಲಾರದು. ಇದನ್ನು ತಿಳಿದುಕೊಂಡು ಬರೆದ ಕಾದಂಬರಿಗಳು ಕನ್ನಡದಲ್ಲಿ ಎಷ್ಟು?

ನಮ್ಮ ಕಾದಂಬರಿಗಳಲ್ಲಿ ಅನುಭವ ವಿಸ್ತಾರವು ಕಡಿಮೆಯೆಂದು ಒಪ್ಪಿಕೊಳ್ಳಬೇಕು. ಅನುಭವ ವಿಸ್ತಾರಕ್ಕೆ ವಿವಿಧ ಜೀವನಗಳನ್ನು ನೋಡುವ ಅವಕಾಶ ಸಿಕ್ಕಬೇಕು. ಲೇಖಕನು ದೇಶ-ವಿದೇಶ ಸಂಚಾರ ಮಾಡಬೇಕು. ಕೂಪ ಮಂಡೂಕ ವೃತ್ತಿಯು ಮಂಗಲಾಚರಣೆಯಾಗಿ ಅಲ್ಲಿ ಹೃದಯ ವಿಶಾಲ ಮಾರ್ಗವು ತೆರೆಯಬೇಕಾದರೆ ಜೀವನಾನುಭವದಲ್ಲಿ ವೈವಿಧ್ಯವಿರಬೇಕು, ಆಳ ವಿಸ್ತಾರ ಹೆಚ್ಚಾಗಬೇಕು.

ಕನ್ನಡ ಕಾದಂಬರಿಕಾರನ ಹೃದಯ ಸಂಪತ್ತು ದೊಡ್ಡದು; ಆದರೆ ದಾರಿದ್ರ್ಯ ಸಂಪತ್ತು ಅದಕ್ಕೂ ದೊಡ್ಡದು. ಇಂದಿನ ಕನ್ನಡ ಲೇಖಕರಲ್ಲಿ ಅಧ್ಯಾಪಕರೇ ಹೆಚ್ಚಿನ ಸಂಖ್ಯೆ. ಆದುದರಿಂದ ಅಧ್ಯಾಪಕ-ಅನುಭವದ ಪರಿಮಿತಿಯಲ್ಲಿ ಕಾದಂಬರಿ ಜೋಕಾಲಿ ಜೀಕುವಂತಾಗಿದೆ. ಜೀವನದ ವಿವಿಧ ರಂಗಗಳಲ್ಲಿ ಕೆಲಸ ಮಾಡುವವರು ಲೆಕ್ಕಣಿಕೆಯನ್ನೆತ್ತಿದರೆ ನಮ್ಮ ಕಾದಂಬರಿ ಪ್ರಪಂಚದ ಬೆಳವಣಿಗೆಗೆ ಇನ್ನೊಂದು ಹೊಸ ಮೆರಗು ಉಂಟಾಗುವದು.

ಕಾಲ್ಪನಿಕವಲ್ಲದ, ಜೀವಂತ ವ್ಯಕ್ತಿಗಳ ಜೀವನವನ್ನು ನಿರೂಪಿಸುವ ಕಾದಂಬರಿಗಳು (Bio-graphical Novels) ಆಂಗ್ಲ ಮುಂತಾದ ಸಾಹಿತ್ಯಗಳಲ್ಲಿ ಹೆಚ್ಚಾಗಿ ಓದಲು ಸಿಗುತ್ತವೆ. ಕನ್ನಡದಲ್ಲಿ ಇಂಥ ಕಾದಂಬರಿಗಳು ಅಪರೂಪ.

"Lust for Life" "Moulin Rouge" ಇಂಥ ಕಾದಂಬರಿಗಳು ನಮ್ಮಲ್ಲಿ ಇನ್ನೂ ಸೃಷ್ಟಿಯಾಗಬೇಕಾಗಿದೆ. ಆದರೆ ಇದು ಅನುಕರಣದಿಂದ ಸಾಧ್ಯವಾಗುವ ಮಾತಲ್ಲ.

ವ್ಯಕ್ತಿಯ ಜೀವನದ ವೈವಿಧ್ಯದಲ್ಲಿ ಅವನ ಹೋರಾಟದಲ್ಲಿ, ಅವನು ಬಾಳನ್ನು ನಡೆಯಿಸಿಕೊಂಡು ಹೋಗುವ ರೀತಿಯಲ್ಲಿ, ಜೀವನದ ಕಾರಂಜಿ ಪುಟದೇಳುತ್ತದೆ. ವ್ಯಕ್ತಿವಿಕಾಸದಲ್ಲಿ ಜೀವನದ ಸ್ಫೂರ್ತಿ ತೆರೆತೆರೆಯಾಗಿ ತೋರಿ ಬರುತ್ತದೆ.

ಕಾದಂಬರಿ ಪ್ರಪಂಚಕ್ಕೆ ಇಂಥ ವ್ಯಕ್ತಿಗಳ ಕಥಾ ಸಾಮಗ್ರಿಯಾಗಬೇಕು. ನಮ್ಮ ನಾಡಿನಲ್ಲಿ ಇಂಥ ವ್ಯಕ್ತಿಗಳ ಕೊರತೆ ಇದೆಯೇದಿಲ್ಲ;

ನೋಡುವ ಕಣ್ಣು ಸಂಕುಚಿತವಾಗಿದೆ. ನಮ್ಮಲ್ಲಿ ವ್ಯಕ್ತಿಯ ಕ್ರಿಯಾಶಕ್ತಿಯನ್ನು ಗುರುತಿಸುವ ಸೂಕ್ಷ್ಮಮತಿ ಇಲ್ಲವಾಗಿದೆಯೇನೊ? ಸಾರ್ವಜನಿಕ ಪ್ರಜ್ಞೆ ತಿಳಿಯಾಗಿ ಜೀವನ ಯೋಗ್ಯತೆಯಲ್ಲಿ ನಿಷ್ಠೆ, ಸ್ಫೂರ್ತಿಗೆ ಆಸರೆ ಕೊಟ್ಟಾಗ ಇಂಥ ಕಾದಂಬರಿಗಳು ಬಂದೇ ಬರುತ್ತವೆ.

ಇಂಥ ಕಾದಂಬರಿಗಳ ಸೃಷ್ಟಿಯು ಕಾದಂಬರಿ ಸಾಹಿತ್ಯಕ್ಕೆ ಅಮೂಲ್ಯವಾದ ಕೊಡುಗೆಯಾಗುತ್ತದೆ.

ಐತಿಹಾಸಿಕ ಕಾಲಕ್ಕೆ ಸಂಬಂಧಿಸಿದ ವ್ಯಕ್ತಿಗಳಾದರೂ ಅವರ ಜೀವನವನ್ನು ಕುರಿತು ಒಳ್ಳೆಯ ಕಾದಂಬರಿಗಳನ್ನು ಬರೆದ ಡಾ. ಹೆಚ್ ತಿಪ್ಪೇರುದ್ರಸ್ವಾಮಿ, ಶ್ರೀ ಬಿ. ಪುಟ್ಟಸ್ವಾಮಯ್ಯ ಇವರು ಉಲ್ಲೇಖನಾರ್ಹರು.

ಕನ್ನಡ ಕಾದಂಬರಿ ಬೆಳೆಯು ಹುಲುಸಾಗಿದೆ. ಗಟ್ಟಿಕಾಳುಗಳೂ ಇವೆ; ಹೊಟ್ಟು ತೌಡೂ ಇದೆ. ಇದು ಬೆಳೆಯುತ್ತಿರುವ ಸಾಹಿತ್ಯದಲ್ಲಿ ಅನಿವಾರ್ಯ.

ಪ್ರಜಾರಾಜ್ಯದ ಸುಕ್ಷೇಮದಲ್ಲಿ ಕಾದಂಬರಿಯ ಸ್ಥಾನ ಹಿರಿದಾಗಿದೆ. ಜನಜೀವನದ ಗತಿಯೇ; ಕಾದಂಬರಿಯ ಸ್ಥಿತಿ.

ಈ ಸಾಹಿತ್ಯ ಪ್ರಭೇದದ ಬೆಳವಣಿಗೆಯ ದೃಷ್ಟಿಯಲ್ಲಿ ಈ ಸೂತ್ರವನ್ನು ಗಮನಿಸಿದಾಗ ಕನ್ನಡ ಕಾದಂಬರಿ ಬೆಳವಣಿಗೆ ಅರ್ಥಪೂರ್ಣವಾಗಿ ಕಾಣುತ್ತದೆ.

ಕಾದಂಬರಿ ಕ್ಷೇತ್ರದಲ್ಲಿ ಅ.ನ.ಕೃ. ಅವರದು ದೊಡ್ಡ ಹೆಸರು. ಅವರನ್ನು ಅಭಿಮಾನಿಗಳು 'ಕಾದಂಬರಿ ಸಾಮ್ರಾಟ್' 'ಕಾದಂಬರಿ ಚಕ್ರವರ್ತಿ' ಎಂದು ಬಾಯಿತುಂಬಾ ಹೊಗಳಿದ್ದಾರೆ. ಕಾದಂಬರಿ ಸಾಹಿತ್ಯ ಕ್ಷೇತ್ರದಲ್ಲಿ ಅ.ನ.ಕೃ. ಮಾಡಿದ ಸೇವೆ ಅಸದೃಶವಾದುದು; ಅನುಪಮವಾದುದು. ಕನ್ನಡ ಕಥಾ ಪ್ರಪಂಚಕ್ಕೆ ಸಲ್ಲಿಸಿದ ಇವರ ಸೇವೆಯನ್ನು, ಇವರ ಕಾರ್ಯವನ್ನು ಕನ್ನಡ ನಾಡು ಎಂದಿಗೂ ಮರೆಯಲಾರದು. ಕನ್ನಡ ಸಾಹಿತ್ಯದ ಬಗ್ಗೆ ನಾಡಿನ ಸುಸಂಸ್ಕೃತ (?) ಜನ ಅಸಡ್ಡೆಯನ್ನು ತಳೆಯುತ್ತಿರುವಾಗ ರಾಯರು 'ಕಥಾಂಜಲಿ'ಯ ಮುಖಾಂತರವಾಗಿ, ಕಾದಂಬರಿಗಳ ಮುಖಾಂತರವಾಗಿ ಓದುಗರಲ್ಲಿ ಅಭಿರುಚಿಯನ್ನು ಉಂಟುಮಾಡಿದರು.

ಅವರ ಕಥೆಗಳಲ್ಲಿಯು ಸುರಮ್ಯಶೈಲಿಯನ್ನು ಮೆಚ್ಚಿದ ಕನ್ನಡ ಜನತೆ ಕನ್ನಡ ಕಥೆಗಳನ್ನು ಆಸ್ಥೆಯಿಂದ ಓದುವಂತೆ ಮಾಡಿತು. ಇಂದಿಗೂ ಓದುಗರನ್ನು ಪಡೆಯುವಲ್ಲಿ ಹಿರಿಯರಾಗಿದ್ದಾರೆ. ಕಾದಂಬರಿ ಪ್ರಪಂಚದಲ್ಲಿ ಇವರ ಹೆಸರು ಮೆರೆಯುತೊಡಗಿದ್ದು ಇವರ ಸತ್ವಪೂರ್ಣವಾದ ಜೀವಂತ ಶೈಲಿಗೆ ಸಾಕ್ಷಿಯಾಗಿರುತ್ತದೆ. ನೂರು ಕಾದಂಬರಿಗಳಲ್ಲಿ ನೂರಾರು ಚಿತ್ರಗಳನ್ನು ಬಿಡಿಸಿದ ಅ.ನ.ಕೃ. ವಿಶಾಲ ಹೃದಯದ ಔದಾರ್ಯದ ಮೂರ್ತಿಯಾಗಿದ್ದಾರೆ. ಅನೇಕ ಕಾದಂಬರಿಗಳಲ್ಲಿ ಇವರ ಸಮಸ್ಯಾಮೂರ್ತಿಯಾಗಿ ಕಂಡರೂ ಆ ಬರಹಗಳ ಹಿಂದೆ ಮಿಡಿಯುತ್ತಿರುವ ರಾಯರ ಮಾನವೀಯತೆ ಅಗಾಧವಾಗಿದೆ. ಮಾನವೀಯತೆಯೆ ಸಾಹಿತ್ಯದ ಮೌಲ್ಯವೆಂದು ಪರಿಗಣಿಸುತ್ತಿರುವ ಜಿಜ್ಞಾಸುಗಳಿಗೆ ಈ ಸಾಹಿತ್ಯದ ಶ್ರೇಷ್ಠತೆಯು ಮನವರಿಕೆಯಾಗುತ್ತದೆ. "ನೂರು ಜನ ನೂರ ತೆರ, ಒಂದೊಂದು ಒಂದು ತರ" ಎನ್ನುವ ಜೀವನದ ವೈವಿಧ್ಯ ವೈಖರಿಯನ್ನು ನೋಡುವವರಿಗೆ ಅ.ನ.ಕೃ. ಕಾದಂಬರಿಗಳು ವಿಪುಲ ಸಾಮಗ್ರಿಗಳನ್ನು ಒದಗಿಸುತ್ತವೆ. ಅ.ನ.ಕೃ. ಅವರ ಈ ಕೃತುಶಕ್ತಿಯ ಹಿಂದೆ ಅಡಗಿದ ಸಾಹಿತ್ಯಸೃಷ್ಟಿ ವೈಭವನನ್ನು ನಾಡು ಮೆಚ್ಚಿದೆ; ಇದು ಅಪೂರ್ವಶಕ್ತಿ.

ಅ.ನ.ಕೃ. ಕಾದಂಬರಿಗಳಲ್ಲಿ ಕಂಡು ಬರುವ ಸರಳ ಮನಂಬುಗುವ ಶೈಲಿ, ಜನಮನವನ್ನು ತೇಲಿಸಿಕೊಂಡು ಹೋಗುವ ಅವರ ಸಂವಾದನಾ ವೈಖರಿ, ಜೀವನದ ವಿವಿಧ ಮುಖಗಳನ್ನು ಸಹಜವಾಗಿ ತೋರಿಸುವ ಅವರ ಅನುಭವವೇದ್ಯ ವಸ್ತುಸೃಷ್ಟಿ ಕನ್ನಡ ಕಾದಂಬರಿ ಸಾಹಿತ್ಯಕ್ಕೆ ಅವರು ನೀಡಿದ ಶ್ರೇಷ್ಠ ಕೊಡುಗೆಗಳಾಗಿವೆ.

ಮೈಸೂರು ವಿಶ್ವವಿದ್ಯಾಲಯದ ಹಿಂದಿನ ಉಪಕುಲಪತಿಗಳೂ, ಕನ್ನಡ ಭಾಷೆಯ ಮಹಾ ಅಭಿಮಾನಿಗಳೂ ಆದ ಶ್ರೀ ದೇ. ಜ. ಗೌ. ಅವರು ಅ.ನ.ಕೃ. ಅವರನ್ನು ಕನ್ನಡದ ರಕ್ಷಾಮಣಿ ಎಂದು ಕರೆದು ಅವರು ಹೊಸ ಸಂಪ್ರದಾಯದ ಅಧ್ವರ್ಯು ಎಂಬುದನ್ನು ಹೇಳಿದ ಮಾತುಗಳು ಇವು.

"....... ನೂರಾರು ಕತೆ ಕಾದಂಬರಿಗಳನ್ನು ರಚಿಸಿ, ಗದ್ಯ ಪ್ರಕಾರವನ್ನು ಹುಲುಸುಗೊಳಿಸಿ ಕನ್ನಡ ನಾಡಿನಲ್ಲೆಲ್ಲ ಖ್ಯಾತನಾಮರಾಗಿರುವ

ಡಾ ಅ.ನ. ಕೃಷ್ಣರಾಯರು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಶಾಶ್ವತವಾದ ಸ್ಥಾನವನ್ನು ಗಳಿಸಿಕೊಂಡಿದ್ದಾರೆ. ಪ್ರವೃತ್ತಿಗನುಗುಣವಾದ ಲೇಖನ ವ್ಯವಸಾಯವನ್ನು ಜೀವನವೃತ್ತಿಯಾಗಿಸಿಕೊಂಡು ತದೇಕಚಿತ್ತತೆಯಿಂದ ದುಡಿದಿದ್ದಾರೆ. ನಾಲ್ಕು ದಶಕಗಳಿಗೂ ಮೀರಿ ಅವರ ಅಸಾಧಾರಣ ಪ್ರತಿಭೆ, ನಿಶಿತಮತಿ, ದೀರ್ಘ ಜೀವಮಾನದ ಅನುಭವ ಸಂಪತ್ತು ಹಾಗು ಬಾಳಿನ ಸಾರವೆಲ್ಲ ಸಾಹಿತ್ಯರೂಪದಲ್ಲಿ ಅಭಿವ್ಯಕ್ತಿಗೊಂಡಿದೆ. ಅವರ ಅನುಭವ ವೈಶಾಲ್ಯಕ್ಕೆ ಹಾಗೂ ವೈವಿಧ್ಯಕ್ಕೆ ಅವರ ಸಾಹಿತ್ಯ ಕೃತಿಗಳು ಮಾರಕಗಳಾಗಿವೆ. ಕಾದಂಬರಿ ಕ್ಷೇತ್ರದಲ್ಲಿ ನೂತನ ಶಕೆಯನ್ನು ಪ್ರಾರಂಭಿಸಿ, ಹೊಸ ಸಂಪ್ರದಾಯದ ಅಧ್ವರ್ಯುವಾದರು. ಆ ಕ್ಷೇತ್ರದ ಗುರುಪೀಠವನ್ನಲಂಕರಿಸಿ, ಅನೇಕರಿಗೆ ದೀಕ್ಷೆಕೊಟ್ಟು ದೊಡ್ಡದೊಂದು ಪೀಳಿಗೆಯನ್ನೆ ಸೃಷ್ಟಿಸಿದರು. ಅವರ ಸ್ಫೂರ್ತಿಯ ಪ್ರೋತ್ಸಾಹದ ಮತ್ತು ಪ್ರೇರಣೆಯ ಫಲವಾಗಿ ಅನೇಕ ಲೇಖನಗಳ ಮೂಲಕ ಹೊರಬಂದ ನೂರಾರು ಕಾದಂಬರಿಗಳು ಕನ್ನಡಿಗರ ಹೃದಯಗಳನ್ನರಳಿಸಿವೆ. ಒಟ್ಟಿನಲ್ಲಿ ಅವರು ಪ್ರಮುಖ ಗೋತ್ರ ಪ್ರವರ್ತಕರಾಗಿ ಕನ್ನಡ ನಾಡಿನಲ್ಲೆಲ್ಲ ವಿರಾಜಮಾನರಾಗಿದ್ದಾರೆ........

........ಅ.ನ.ಕೃ. ಅವರ ಕೃತಿಗಳ ಹೆಸರೆತ್ತಿದ ಕೂಡಲೇ ಒಣಕಲ ಎದೆಯಲ್ಲಿಯೂ ಹಸಿರು ಚಿಮ್ಮುತ್ತದೆ. ಮಧ್ಯಮ ವರ್ಗದ ಸಮಾಜದಿಂದೆತ್ತಿಕೊಂಡ ಸಾಮಗ್ರಿ, ಪಾತ್ರರಚನೆ ಹಾಗೂ ಭಾಷಾಶೈಲಿಗಳು ಜನ ಮನಸ್ಸನ್ನು ಸೂರೆಗೊಂಡಿವೆ. ಕನ್ನಡ ನಾಡಿನಲ್ಲಿ ವಾಚನಾಭಿರುಚಿ ಹೆಚ್ಚಲು ಅ.ನ.ಕೃ. ಅವರ ಕೃತಿಗಳು ಪ್ರಮುಖ ಕಾರಣವೆಂದು ನಿಸ್ಸಂಶಯವಾಗಿ ಹೇಳಬಹುದು. ಸರಳವಾದ ವಸ್ತು, ನೇರವಾದ ಕಥಾನಿರೂಪಣೆ, ತೊಡಕಿಲ್ಲದ ಪಾತ್ರರಚನೆ, ಒನಿಯಾದ ದ್ರಾಕ್ಷಾಪಾಕದ ನಾಟಕೀಯ ಭಾಷೆ ಹಾಗೂ ಗ್ರಂಥದ ಮಿತಗಾತ್ರ– ಇವು ಅವರ ಕಾದಂಬರಿಗಳ ಜನ ಪ್ರಿಯತೆಗೆ ಕಾರಣವಾಗಿವೆ. ("ಕನ್ನಡದ ರತ್ನಾಮಣಿ". ಕರ್ಮವೀರ. ಜೂನ ೨೮, ೧೯೭೦)

ಇವು ಕಾದಂಬರಿ ಸಾಹಿತ್ಯಕ್ಕೆ ಅ.ನ.ಕೃ. ಅವರ ಕೊಡುಗೆಯಾಗಿವೆಯೆಂದು ಹೇಳಲು ದೇ.ಜ.ಗೌ. ಅವರ ಬರಹ ಸಾಕ್ಷಿ ಹೇಳುತ್ತವೆ.

ಅ.ನ.ಕೃ. ಅವರು ೯೫ ಸಾಮಾಜಿಕ ಕಾದಂಬರಿಗಳನ್ನೂ — 'ಅಗ್ರ-ತಾಂಬೂಲ'ದಿಂದ 'ದಾದಿಯುಮುಗ' ನವರೆಗೆ ೧೬ ಐತಿಹಾಸಿಕ ಕಾದಂಬರಿಗಳನ್ನೂ — 'ಗರುಡಮುಚ್ಚೆ'ಯಿಂದ 'ಪ್ರಳಯಾನಂತರ'ದವರೆಗೆ—. ಹೀಗೆ ಒಟ್ಟು ೧೧೧ ಕಾದಂಬರಿಗಳನ್ನು ಬರೆದಿದ್ದಾರೆ. ಡಾ.ಹಾ.ಮಾ.ನಾ. ಹೇಳುವಂತೆ, "........ಕನ್ನಡ ಸಾಹಿತ್ಯದಲ್ಲಿ ಅವರಷ್ಟು ದೊಡ್ಡ ಸಂಖ್ಯೆಯ ಕೃತಿಗಳನ್ನು ರಚಿಸಿರುವ ಇನ್ನೊಬ್ಬ ಲೇಖಕನಿಲ್ಲ.... (ರಸಚೇತನ ಪುಟ-೧೩೮) ಇವರೇ ಮತ್ತೆ ಬರೆಯುತ್ತಾರೆ. "....ಬರಿಯ ಸಂಭಾಷಣೆಯಲ್ಲಿಯೇ ಕಾದಂಬರಿಯನ್ನು ಬರೆಯುತ್ತಾರೆ. ಅವರ ಕಾದಂಬರಿ ಪ್ರಪಂಚ-ವಸ್ತುವಿನ ಆಯ್ಕೆ, ಸಮಸ್ಯೆಗಳ ವೈವಿಧ್ಯಗಳ ದೃಷ್ಟಿಯಿಂದ ವಿಸ್ತಾರವಾದುದು. ಆದರೆ ನಿರ್ವಹಣೆಯ ದೃಷ್ಟಿಯಿಂದ ತುಂಬ ಸೀಮಿತವಾದದ್ದು. "ಅವರ ಪಾತ್ರಗಳಲ್ಲಿ ವೈವಿಧ್ಯತೆಯ ಬಲವಿಲ್ಲದಿರುವುದೇ ಒಂದು ದೋಷ. ಬೇರೆ ಬೇರೆ ಸಂದರ್ಭಗಳಿಗೆ, ಸಂಗತಿಗಳಿಗೆ, ಸಮಸ್ಯೆಗಳಿಗೆ ಬೇಕಾದ ಬೇರೆ ಬೇರೆ ಪಾತ್ರಗಳು ಅ.ನ.ಕೃ. ಅವರ ಕುಲುಮೆಯಲ್ಲಿ ಕರಗಿ ಹೋಗಿ ತಮ್ಮತನವನ್ನು ಕಳೆದುಕೊಂಡು ಸಾಧಾರಣೀಕೃತರಾಗಿ ಬಿಡುತ್ತಾರೆ". ಕಲೆ ಕೌಶಲ್ಯವಾಗಿ ಮಾರ್ಪಟ್ಟಿದ್ದೇ ಅ.ನ.ಕೃ. ಅವರ ದೌರ್ಬಲ್ಯ. ಆದರೆ ಎಂದಿನಂತೆ ಅವರು ನಮ್ಮ ಅತ್ಯಂತ ಜನಪ್ರಿಯ ಕಾದಂಬರಿಕಾರರಾಗಿ ಇರುವದೇ ಅವರ ಹೆಚ್ಚುಗಾರಿಕೆ.

ಈ ಶತಮಾನದ ನಾಲ್ಕನೆಯ ದಶಕವನ್ನು ಅ.ನ.ಕೃ. ದಶಕವೆಂದು ಕರೆದರೆ ತಪ್ಪಾಗಲಾರದು. ಪ್ರಗತಿಶೀಲ ಸಾಹಿತ್ಯದ ಅಧ್ವರ್ಯರಾಗಿ ಅವರು ನಮ್ಮ ಸಾಹಿತ್ಯಕ್ಕೆ ಹೊಸ ದನಿಯನ್ನು ಕೊಡಿಸಿದರು. ಸಿದ್ಧವೆನಿಸಿದ ಅನೇಕ ವಿಚಾರಗಳನ್ನು ನಮ್ಮ ಸಾಹಿತ್ಯದಲ್ಲಿ ಸಂಸ್ಥಾಪಿಸಿದವರು ಅ.ನ.ಕೃ. ಫಲವಾಗಿ ಅವರೇ ಮಡಿವಂತರ ಪಾಲಿಗೆ ನಿಷಿದ್ಧರಾದರು. ಸೋಜಿಗವೆಂದರೆ ಯಾವ ವಿಚಾರಗಳಿಗಾಗಿ ಅ.ನ.ಕೃ. ಟೀಕೆಗೊಂಡರೋ ಅವೇ ಇಂದು ಪ್ರಧಾನವಾಗಿವೆ. ಶಾಸ್ತ್ರೀಯವೆಂದು ಪರಿಗಣಿಸಲ್ಪಟ್ಟಿವೆ. ಹೊಸ ಪೀಳಿಗೆಯ ಲೇಖಕರ ಬಳಗವೊಂದನ್ನು ಈ ಹೊತ್ತಿನಲ್ಲಿ ಕಟ್ಟಿದ್ದು ಅ.ನ.ಕೃ. ಅವರ ದೊಡ್ಡ ಸಾಧನೆ. ಇಂದಿನ ಎಷ್ಟೋ ಹೆಸರಾಂತ ಲೇಖಕರು ಅ.ನ.ಕೃ. ಶೋಧನೆಯ ಫಲ........

....ಲೇಖಕರಾಗಿ, ಲೇಖಕರನ್ನು ಸೃಷ್ಟಿಸಿದವರಾಗಿ ನವಜಾಗ್ರತಿಯ ಪ್ರೇರಕರಾಗಿ, ಅ.ನ.ಕೃ. ಕನ್ನಡಕ್ಕೆ ಕೊಟ್ಟಿರುವದು ಅಪಾರ. "ನನ್ನಂಥವರು ಕನ್ನಡಕ್ಕೆ ಅನೇಕರಿದ್ದಾರೆ. ಆದರೆ ನನಗಿರುವುದು ಒಂದೇ ಕನ್ನಡ." ಎನ್ನುವದು ಅವರದೇ ಒಂದು ಮಾತು. (ರಸಚೇತನ-೧೩೯-೧೪೦-೧೪೧)

ಡಾ.ಹಾ.ಮಾ.ನಾ. ಅವರ ಈ ಲೇಖನವನ್ನು ಓದಿದಾಗ ಅ.ನ.ಕೃ. ಅವರು ಕಾದಂಬರಿ ಸಾಹಿತ್ಯಕ್ಕೆ ನೀಡಿದ ಅಮೋಘ ಕೊಡುಗೆಯ ಅರಿವಾಗುತ್ತದೆ.

ಅ.ನ.ಕೃ. ಅವರ ಇನ್ನೊಂದು ಮಹತ್ವದ ಕೊಡುಗೆಯೆಂದರೆ ಕಾದಂಬರಿಗಳಲ್ಲಿ ಅವರು ರಚಿಸಿದ ಕಲಾವಿದರ ಚಿತ್ರಣ. "ಸಮಾಜದ ದೀನ-ದಲಿತರಿಂದ ಕೋಟ್ಯಾಧೀಶರವರೆಗೆ ನೂರಾರು ವ್ಯಕ್ತಿಗಳನ್ನು ಅವರು ಸೃಷ್ಟಿಸಿರುವರು. ಅವರ ಈ ಅಪರಿಮಿತ ಸೃಷ್ಟಿಯಲ್ಲಿ ಕಲಾವಿದರೂ ಇದ್ದಾರೆ. ೧೯೩೪ರಿಂದ ಆರಂಭವಾದ ಅವರ ಕಲಾವಿದರ ಜೀವನದ ಉದಯರಾಗ ಒಂದೇ ಸಮನೆ ಮುಂದುವರೆಯಿತು. ಉದಯರಾಗ, ಸಂಧ್ಯಾರಾಗ, ಸಾಹಿತ್ಯರತ್ನ, ಗಾಜಿನಮನೆ, ಕನ್ನಡಮ್ಮನ ಗುಡಿಯಲ್ಲಿ, ದೀಪಾರಾಧನೆ, ನಟಸಾರ್ವಭೌಮ, ಸಂಗ್ರಾಮ, ಬಣ್ಣದ ಬದುಕು, ಏಣಾಕ್ಷಿ, ಮಿಯಾಮಲ್ಹಾರ, ಕಲಾವಿದ, ಪರಿವರ್ತನ. ಇವೇ ಮೊದಲಾದ ಕಾದಂಬರಿಗಳಲ್ಲಿ ಅವರು ಚಿತ್ರಕಾರ, ಸಂಗೀತಗಾರ, ಸಾಹಿತಿ, ನಟ, ಶಿಲ್ಪಿ, ನರ್ತಕಿ, ಸಿನೇಮಾತಾರೆ ಮೊದಲಾದವರ ಜೀವನದ ಸುಖದುಃಖಗಳು, ಅವರ ಜೀವನದ ಏರುಪೇರುಗಳು, ಕನ್ನಡ ನಾಡಿನಲ್ಲಿ ಇಂಥ ಕಲಾವಿದರಿಗೆ ಇರುವ ಸ್ಥಾನ ಮಾನಗಳು ಮೊದಲಾದವುಗಳನ್ನು ಕೂಲಂಕಷವಾಗಿ, ಕಲಾತ್ಮಕವಾಗಿ ಚಿತ್ರಿಸಿದ್ದಾರೆ."

ಡಾ. ಕೃಷ್ಣಮೂರ್ತಿ ಕಿತ್ತೂರ ಅವರು ಈ ಬಗ್ಗೆ ಹೇಳುವ ಮಾತುಗಳನ್ನು ಇಲ್ಲಿ ಉದ್ಧರಿಸುತ್ತಲಿದ್ದೇನೆ. ".... ಕೃಷ್ಣರಾಯರು ಕಲಾವಿದರ ಜೀವನವನ್ನು ಹಲವು ಕಾದಂಬರಿಗಳಲ್ಲಿ ಚಿತ್ರಿಸಿರುವದು. ಅವರ ಈ ಎಲ್ಲ ಕಾದಂಬರಿಗಳೂ ಒಂದೇ ರೀತಿಯ ಯಶಸ್ಸನ್ನು ಪಡೆದಿವೆಯೆಂದು ಹೇಳಲಾಗದಿದ್ದರೂ, ಈ ಎಲ್ಲ ಕಾದಂಬರಿಗಳೂ ತುಂಬ ವಾಚನೀಯವಾಗಿವೆ ಎಂಬುದನ್ನು ಯಾರೂ ಅಲ್ಲಗಳೆಯಲಾರರು. ವಿವಿಧ ಕಲಾವಿದರ ಜೀವನ

ವನ್ನು ಲೇಖಕರು ಚಿತ್ರಿಸಿದ್ದು ಶ್ಲಾಘನೀಯವಾದರೂ, ಅವರು ಆಯಾ ಕಲಾವಿದನ ಜೀವನವನ್ನು ಅತ್ಯಂತ ಸಮೀಪದಿಂದ ಕಂಡಂತೆ ತೋರುವದಿಲ್ಲ. ಈ ಚಿತ್ರಣಗಳಲ್ಲಿ ವಿಸ್ತಾರವಿದ್ದರೂ ಆಳವಿಲ್ಲ. ಆದ್ದರಿಂದ ಈ ಕಾದಂಬರಿ ಶಾಶ್ವತ ಸಾಧನವನ್ನು ಪಡೆಯುವವೇ ಎಂಬ ಸಂದೇಹ ಬರಬಹುದು.... ಏನೇ ಇದ್ದರೂ ಕೃಷ್ಣರಾಯರ ಪ್ರತಿಭೆಯನ್ನೂ, ಅದ್ವಿತೀಯ ಆಕರ್ಷಕ ಶೈಲಿಯನ್ನೂ, ಕಳಕಳಿಯನ್ನೂ ನಾವು ಮೆಚ್ಚಲೇಬೇಕು. ಕನ್ನಡದ ಬಗ್ಗೆ, ಕನ್ನಡ ಕಲಾವಿದರ ಬಗ್ಗೆ ಅವರು ತೋರುವ ಕಳಕಳಿ, ಅಭಿಮಾನ, ಮೆಚ್ಚು ವಂತಿದೆ. ಕೃಷ್ಣರಾಯರ ಕಲಾವಿದರ ಕಾದಂಬರಿಗಳನ್ನು ಓದಿ, ಕನ್ನಡ ಕಲಾವಿದರ ಜೀವನವನ್ನು ನಾವು ತಿಳಿದುಕೊಳ್ಳಬಹುದಾಗಿದೆ. ಈ ರೀತಿ ಯಲ್ಲಿ ಅವರನ್ನು ಬಿಟ್ಟರೆ ಬೇರೆ ಹೆಚ್ಚಿನ ಪ್ರಯತ್ನಗಳು ನಡೆದಿಲ್ಲ. ಅವರು ಆ ರೀತಿಯಿಂದಲೂ ಕನ್ನಡಕ್ಕೆ ವಿಶಿಷ್ಟವಾದ ಕೊಡುಗೆಯನ್ನು ನೀಡಿರುವರು. ಆದ್ದರಿಂದ ಕನ್ನಡಿಗರು ಅವರಿಗೆ ಕೃತಜ್ಞರಾಗಿರಬೇಕು. (ಕರ್ಮವೀರ ಹಾಗೂ-ರಸಚೇತನ. ಪುಟಗಳು. ೪೯೪ ಮತ್ತು ೫೦೧).

ಕಲಾವಿದರ ಚಿತ್ರಣದಲ್ಲಿ ಅ.ನ.ಕೃ. ಲೇಖನಿಯು ರಭಸದಿಂದ ರಸವತ್ತಾಗಿ ಹರಿದಿದೆ. ಕನ್ನಡ ಸಾಹಿತ್ಯದ ಕಾದಂಬರಿ ಪ್ರಪಂಚಕ್ಕೆ ಈ ಕೊಡುಗೆ ಅಸಾಧಾರಣವಾಗಿದೆ. ಈ ಮೊದಲು ಇಂಥ ಚಿತ್ರಣಗಳು ಇಷ್ಟು ವಿಪುಲವಾಗಿ, ವೈವಿಧ್ಯಪೂರ್ಣವಾಗಿ ಬಂದಿರಲಿಲ್ಲ. ಇಲ್ಲಿ ಆಳ ವಿಸ್ತಾರಗಳ ಮಾತು ಗೌಣ. ಕಲಾವಿದರ ಜೀವನ ಎಂತಹುದೋ ಅಂಥ ಜೀವನ ಸೃಷ್ಟಿ ಯಾಗುತ್ತದೆ. ಸಾಹಿತ್ಯಸೃಷ್ಟಿ ಜೀವನದೃಷ್ಟಿಯಿಂದ ಪ್ರೇರಿತವಾಗಿರುತ್ತದೆ.

ಅ.ನ.ಕೃ. ಅವರು ಕನ್ನಡ ಸಾಹಿತ್ಯದಲ್ಲಿ, ಕಾದಂಬರಿ ಮೂಲಕ ಮಾಡಿದ ಸಾಧನೆ ಅದ್ಭುತವಾದುದು.

ಕನ್ನಡದ ಓದುಗರ ವೃತ್ತವನ್ನು ಪರಿಣಾಮಕಾರಿಯಾಗಿ ಹಿಗ್ಗಿಸಿ ದರು; ಕನ್ನಡವೆಂದರೆ ಮೂಗು ಮುರಿಯುತ್ತಿದ್ದ ಆಂಗ್ಲ ಭಾಷಾ ಪ್ರವೀಣರು ಅ.ನ.ಕೃ. ಕಾದಂಬರಿಯನ್ನು ಮೆಚ್ಚತೊಡಗಿದರು.

ಗೃಹಿಣಿಯರಿಗೆ, ಅ.ನ.ಕೃ. ಕಾದಂಬರಿಗಳು ಸತ್ಯಪುಸ್ತಕವಾದವು. ಅಡಿಗೆಯ ಜಗಲಿಯ ಮೇಲೆ ಅ.ನ.ಕೃ. ಕಾದಂಬರಿಗಳ 'ಸೆಲ್ಫ್' ಶೋಭಿಸ

ತೊಡಗಿತು. ನಾಡಿನ ದೃಷ್ಟಿಯಿಂದ ಈ ಸಾಧನೆ ಗಮನಾರ್ಹವೆಂದೇ ಹೇಳಬೇಕು.

'ಸಾಹಿತ್ಯವನ್ನು ಜೀವನಕ್ಕೆ ಹತ್ತಿರ ತಂದವರಲ್ಲಿ ಅ.ನ.ಕೃ. ಪ್ರಮುಖರು.'

ಶ್ರೀ. ಎಲ್. ಎಸ್. ಶೇಷಗಿರಿರಾವ್ ಹೇಳುವಂತೆ, "…. ಇಂದು ಸಾಹಿತ್ಯವನ್ನು ಓದುವವರ ಸಂಖ್ಯೆ ಹೆಚ್ಚಿದ್ದರೆ, ಇಂದು ಸಾಹಿತ್ಯದ ಮೂಲಕ ಒಂದು ದೊಡ್ಡ ಬಳಗವನ್ನು ಮುಟ್ಟಲು ಸಾಧ್ಯವಿದ್ದರೆ ಅದಕ್ಕೆ 'ಅ.ನ.ಕೃ.' ಅವರು ಬಹುಮಟ್ಟಿಗೆ ಕಾರಣರು."

ಬರಹದ ಭಾಷೆ ಸರಳವಾಗಲು, ಲಲಿತವಾಗಲು ಅ.ನ.ಕೃ. ಅವರ ಪ್ರಭಾವ ಸ್ವಲ್ಪವಲ್ಲ.

ವೆಂಕಟಾಚಾರ್ಯರ, ಗಳಗನಾಥರ ಕಾದಂಬರಿಗಳಲ್ಲಿ ಕನ್ನಡ ಗದ್ಯ ತನ್ನ ಜಾಯಮಾನವನ್ನು ಕಂಡುಕೊಳ್ಳಲು ಹೆಣಗುತ್ತಿರುವುದು ಸ್ಪಷ್ಟ. ಎಂ ಎಸ್. ಪುಟ್ಟಣ್ಣನವರು ಗದ್ಯಕ್ಕೆ ತೀಕ್ಷ್ಣತೆಯನ್ನು ತಂದುಕೊಟ್ಟರು. ಅದಕ್ಕೆ ಲಾಲಿತ್ಯವನ್ನೂ ಮಾಧುರ್ಯವನ್ನೂ ತಂದುಕೊಟ್ಟವರಲ್ಲಿ ಅ.ನ.ಕೃ. ಒಬ್ಬರು.'

"ಅ.ನ.ಕೃ. ಭಾರತೀಯ ಸಂಸ್ಕೃತಿಯನ್ನು ಜೀವನದಲ್ಲಿ ಅಡಗಿಸಿ ಕೊಂಡಾಗ ಅದು ವ್ಯಕ್ತಿತ್ವಕ್ಕೆ ಎಂತಹ ಪ್ರಭೆಯನ್ನು ನೀಡಬಲ್ಲುದು ಎನ್ನುವುದನ್ನು ಕಲ್ಪನಾತ್ಮಕವಾಗಿ ಸಾಕ್ಷಾತ್ಕರಿಸಿಕೊಂಡು ಜೀವಕಳೆ ಕೊಟ್ಟು ಪಾತ್ರಗಳನ್ನು ಸೃಷ್ಟಿಸುವಲ್ಲಿ ಯಶಸ್ವಿಗಳಾಗಿದ್ದಾರೆ.....ಅ.ನ.ಕೃ. ನಮ್ಮ ಸಂಸ್ಕೃತಿಯ ಜೀವಂತ ಮೂರ್ತಿಗಳನ್ನು ಸೃಷ್ಟಿಸಬಲ್ಲರು. 'ಸಂಧ್ಯಾರಾಗ'ದ ಮೀನಾಕ್ಷಮ್ಮ 'ಮಂಗಳಸೂತ್ರ'ದ ಲಕ್ಷ್ಮಮ್ಮ ಮೊದಲಾದವರನ್ನು ಉದಾ ಹರಿಸಬಹುದು. 'ಗೃಹಲಕ್ಷ್ಮಿ', 'ರುಕ್ಮಿಣಿ' ಮುಂತಾದ ಕಾದಂಬರಿಗಳಲ್ಲಿ ಅ.ನ.ಕೃ. ಭಾರತೀಯ ಸಂಸ್ಕೃತಿಯು ಬಾಳಿನಲ್ಲಿ ದೇದೀಪ್ಯಮಾನವಾಗಿ ಬೆಳಗುವುದನ್ನು ಚಿತ್ರಿಸಿದರು. ಈ ಚಿತ್ರಣ ಕಾದಂಬರಿಯ ಜಗತ್ತಿಗೆ ಕಾಲಿ ಡುವದು ವಸ್ತುವಿನ ಯಾವುದೋ ಅಗತ್ಯವನ್ನು ಪೂರೈಸುವದಕ್ಕಲ್ಲ. ಇವು ಅಲ್ಲಿ ಸಹಜವಾಗಿ ಕಾಣಿಸಿಕೊಂಡು ಸಹಜವಾಗಿ ನಡೆಯುವ ಪಾತ್ರಗಳು, ಎನ್ನುವದು ಕಲೆಯ ದೃಷ್ಟಿಯಿಂದ ಗಣನೀಯ. ಬಾಳಿನ ಮೌಲ್ಯಗಳು

ಮರೆಯಾಗಿ ದಿಗ್ಭ್ರಮೆ, ಹಗುರ ಜೀವನ ಬೆಳೆಯುತ್ತಿರುವ ಕಾಲದಲ್ಲಿ." ಅ.ನ.ಕೃ. ಅವರದು ಅಸಾಧಾರಣ ಕೊಡುಗೆಯಾಗಿದೆ.

"ಅ.ನ.ಕೃ. ಕಾದಂಬರಿಗಳನ್ನು ಓದುತ್ತ ಹೋದಂತೆ ಸುತ್ತಲಿನ ಪ್ರಪಂಚ ಕರಗಿ ಹೋದಂತೆ ಭಾಸವಾಗುತ್ತದೆ. ಕಾಲ ಸ್ತಬ್ಧವಾಗಿ ನಿಂತಂತೆ ಭಾಸವಾಗುತ್ತದೆ. ಶುದ್ಧ ಮಾನವ ಹೃದಯ, ಸಹಜ ಪ್ರೀತಿಯ ಜ್ಯೋತಿ ಪ್ರವಾಹ ಹೃದಯದಿಂದ ಹೃದಯಕ್ಕೆ ಹರಿದಂತೆ ಭಾಸವಾಗುತ್ತದೆ. ನಿತ್ಯ ಜೀವನದ ಚಿಲ್ಲರೆ ತಾಪತ್ರಯಗಳು, ಆವೇಷಗಳು, ಸ್ಪರ್ಧೆಗಳಲ್ಲಿ ಮರೆಯಾಗಿ ಹೋದ ಭಾಗ್ಯವೊಂದು–ನಿರ್ಮಲ ಹೃದಯದ ಅಂತಃಕರಣ. ಮೌಲ್ಯದಲ್ಲಿ ಹತ್ತು ಚಿನ್ನದ ಗಣಿಗಳನ್ನು ಮೀರಿಸಿದ ನೈಜಪ್ರೇಮವನ್ನು ಸಹಜವಾದ ತೇಜಸ್ಸಿನಿಂದ ಪ್ರತ್ಯಕ್ಷವಾದಂತೆ ಎನ್ನಿಸುತ್ತದೆ. ಮಾನವ ಸ್ವಭಾವಕ್ಕೆ ಸಾಧ್ಯವಾದ ವೈಭವದ ಸಾಕ್ಷಾತ್ಕಾರ ಒಂದು ಕ್ಷಣವಾದರೂ ಆಗುತ್ತದೆ. ಈ ಹೃದಯದ ಬಂಗಾರದ ಜೊತೆಗೆ ಹೋಲಿಸಿದಾಗ ಜೀವನದಲ್ಲಿ ಉಳಿದುದೆಲ್ಲ ಅಧಿಕಾರ, ವೈಭವ. ವಿಷಯ ಸುಖವಲ್ಲ– ಕಾಗೆ ಬಂಗಾರ ಎನ್ನುವ ದರ್ಶನ ಕಲ್ಪನೆಗೆ ಆಗುತ್ತದೆ. (ಎಲ್.ಎಸ್. ಶೇಷಗಿರಿರಾವ್.)

ಈ ವಿಶಿಷ್ಟ ಶಕ್ತಿ ಅ.ನ.ಕೃ. ಅವರ ಸಾಹಿತ್ಯ ಶಕ್ತಿ. ಕಾದಂಬರಿ ಕ್ಷೇತ್ರದಲ್ಲಿ ಈ ತಲ್ಲೀನತೆಯನ್ನು ತಂದುಕೊಡುವ ಅಪ್ಪೃತಶೈಲಿ ಅ.ನ.ಕೃ. ಅವರ ವಿಶಿಷ್ಟ ಕೊಡುಗೆಯಾಗಿದೆ.

ಅ.ನ.ಕೃ. ಓದುಗರನ್ನು ತಮ್ಮ ಪ್ರಪಂಚದ ಪ್ರಜೆಗಳನ್ನಾಗಿ ಮಾಡಿಕೊಳ್ಳುತ್ತಾರೆ. ಈ ಪ್ರಜಾರಾಜ್ಯದಲ್ಲಿ ತನ್ಮಯತೆ ರಸೋಲ್ಲಾಸವಿರುತ್ತದೆ.

## ಅ.ನ.ಕೃ. ಹಿರಿಮೆ

ಅ.ನ.ಕೃ. ಅವರ ಹಲವು ಸಾಧನೆಗಳಲ್ಲಿ, ಕನ್ನಡಕ್ಕೆ ಕೊಡಮಾಡಿದ ಕೊಡುಗೆಯಲ್ಲಿ, ಕನ್ನಡ ಕಾದಂಬರಿ ಸಾಹಿತ್ಯಕ್ಕೆ ಕೊಟ್ಟ ಅಪಾರ ಕೊಡುಗೆಗಳಲ್ಲಿ ಇಂತಹದೇ ಅತ್ಯಂತ ಶ್ರೇಷ್ಠವಾದುದೆಂದು ಹೇಳುವುದು ಕಠಿಣ.

"ತನ್ನತನದ ಅರಿವನ್ನು ಕನ್ನಡ ಜನಪದದಲ್ಲಿ ಮೂಡಿಸಿದರು.

ಸತ್ತವರಂತೆ ಬಿದ್ದಿದ್ದ ಕನ್ನಡ ಜನ ಅ.ನ.ಕೃ. ವಾಣಿಯನ್ನು ಕೇಳಿ

ಚೇತರಿಸಿಕೊಂಡರು. ತಾವು ಕನ್ನಡಿಗರೆಂಬ ಹೆಮ್ಮೆ ಅವರದಾಯಿತು.

ನಾಡು ಹಂಚಿ ಹೋಗಿದ್ದ ವೇಳೆಯಲ್ಲೂ, ಕನ್ನಡಿಗರೆಲ್ಲ ಒಂದೇ ನೆಲದ ಮಕ್ಕಳೆಂಬ ಭಾವನೆಯನ್ನು ರೂಪಿಸಿದರು.

ವಾಚನಾಭಿರುಚಿಯನ್ನು ಕನ್ನಡ ಜನರಲ್ಲಿ ಉಂಟುಮಾಡಿದ ವೆಂಕಟಾಚಾರ್ಯ, ಗಳಗನಾಥರ ಸಾಲಿನಲ್ಲಿ ನಿಲ್ಲುವ ಹೆಸರು ಅ.ನ.ಕೃ.

ಅವರು ಕಣ್ಣಾಡಿಸಿದ ಲೇಖನಿ, ಸಂದರ್ಶಿಸಿದ ಕುಂಚ ಹೊಸ ಸೃಷ್ಟಿಗೆ ಕಾರಣವಾದವು.

ನವೋದಯದ ತಂಗಾಳಿ, ಹೊಂಬಿಸಿಲುಗಳಲ್ಲಿ ಗರಿಗೆದರಿದ ನಾಡಿನ ಹತ್ತು ಮೂಲೆಗಳ ನೂರು ಹಕ್ಕಿಗಳಿಗೆ 'ಅನುಭವ ಮಂಟಪ' ವಾಗಿತ್ತು ಅ.ನ.ಕೃ. ಮನೆ."

ಶ್ರೀ ನಿರಂಜನರು ಹೇಳುವ ಹಾಗೆ "ಒಬ್ಬ ಕೃಷ್ಣರಾಯರು ಸಲ್ಲಿಸಿರುವುದು ನೂರು ಸಾಹಿತಿಗಳ, ನೂರು ಕಲಾವಿದರ, ನೂರು ಜನ ನಾಡು ಕಟ್ಟುವವರ, ಸಾಲವನ್ನು ಒಂದು ಜೀವಮಾನದಲ್ಲೇ ಮಾಡಿರುವುದು ಹಲವು ಜನ್ಮಗಳ ಕೆಲಸ."

"ಅ.ನ.ಕೃ. ಬರೆದುದೆಲ್ಲ ಶ್ರೇಷ್ಠ ಸಾಹಿತ್ಯವಲ್ಲ" ಎಂದು ವಿಮರ್ಶಕರು ನುಡಿಯಬಹುದು.

"ಬರೆದುದೆಲ್ಲವೂ ಶ್ರೇಷ್ಠವಾಗಿರುವ ಸಾಹಿತಿ ಈ ಲೋಕದಲ್ಲಿ ಯಾರಿದ್ದಾರೆ? ಒಂದು ಕೃತಿ ಇರಬಹುದು, ಹತ್ತು ಇರಬಹುದು— ಶ್ರೇಷ್ಠ ಸಾಹಿತ್ಯವನ್ನು ಲೇಖಕನೊಬ್ಬ ರಚಿಸಿದ್ದಾನೆ ಎನ್ನುವುದೇ ಹೆಗ್ಗಳಿಕೆಯ ಅಂಶ.

ವಾಸ್ತವ ಸಂಗತಿಯೆಂದರೆ ಅ.ನ.ಕೃ. ಹಿರಿಮೆಗೆ ಕಾರಣ ಅವರ ಬರವಣಿಗೆ ಮಾತ್ರವಲ್ಲ. ಅದು ಅವರ ಒಟ್ಟು ಕಾಯಕ. ಮೇರೆ, ತೂಕಗಳನ್ನು ಖಚಿತ ಪಡಿಸಲಾರದಂಥ ಸಾಧನೆ.

ಅ.ನ.ಕೃ. ಅವರಿಂದ ಸಾಹಿತ್ಯ ಜನಪ್ರಿಯವಾಯಿತು. ಅವರ ಕಣ್ಕಾಪಿನಲ್ಲಿ ಹಲವಾರು ಯುವಕ ಲೇಖಕರು ಉತ್ತಮ ಕತೆಗಾರರಾದರು, ಕಾದಂಬರಿಕಾರರಾದರು, ಕಲಾವಿದರು, ಚಿತ್ರಗಾರರು, ಸಂಗೀತಗಾರರು, ನಟರು, ನಟಿಯರು ಬೆಳಕಿಗೆ ಬಂದರು.

ಜಾತಿಯ ಕೋಟೆಗಳು ಪಾಳು ಬಿದ್ದವು.

ಕುರುಡು ಸಂಪ್ರದಾಯಗಳು ಬಿಲ ಸೇರಿದವು

ಕನ್ನಡ ಮನೆ ಮನಗಳಲ್ಲಿ ಅ.ನ.ಕೃ. ಮೂರಕ್ಷರ ಚಿರಸ್ಥಾನ ಗಳಿಸಿ ಬಹಳ ಕಾಲವಾಯಿತು. (ನಿರಂಜನ-ರಸಚೇತನ ೬೫,೬೬,೬೭)

ಅ.ನ.ಕೃ. ಕೃತಿನಿಷ್ಠರು. ಆ ನಿಷ್ಠೆಯೇ ಅವರ ತಪಸ್ಸು. ಸಾಹಿತ್ಯ ತಪಸ್ಸಿನಲ್ಲಿ ಅ.ನ.ಕೃ. ಯಾವಾಗಲೂ ತಲ್ಲೀನರು. ಹೊಸವಿಷಯ, ಹೊಸ ದೀಪ, ಹೊಸವಿಚಾರಗಳ ಪ್ರಯೋಗಗಳಿಂದಲೇ ಅವರ ಸಾಹಿತ್ಯಸೃಷ್ಟಿ ಪುಟಗೊಂಡಿತು. ಕನ್ನಡ ಗದ್ಯಸಾಹಿತ್ಯದಲ್ಲಿಯೇ ಅ.ನ.ಕೃ. ಕಾದಂಬರಿ ಗಳು ವೈಶಿಷ್ಟ್ಯಪೂರ್ಣವಾದ ಸ್ಥಾನವನ್ನು ಗಳಿಸಿಕೊಂಡವು.

ಸರಳವಾದ ತಂತ್ರ, ಮಿತವಾದ ಖಚಿತವಾದ ಶಬ್ದ ಪ್ರಯೋಗದಿಂದ, ಲಲಿತವಾದ ಸನ್ನಿವೇಶಗಳಿಂದ ಅ.ನ.ಕೃ. ಕಾದಂಬರಿಗಳು ಚೇತೋಲ್ಲಾಸ ವಾದವು.

ಅ.ನ.ಕೃ ಕಾದಂಬರಿಗಳು ಕನ್ನಡ ಗದ್ಯಸಾಹಿತ್ಯಕ್ಕೆ ಅಮೋಘವಾದ ಕಾಣಿಕೆಗಳು.

ಕನ್ನಡ ಗದ್ಯಸಾಹಿತ್ಯಕ್ಕೆ ನೂತನ ಪರಂಪರೆ ಹಾಕಿಕೊಟ್ಟಿದ್ದಾರೆ. ಇದು, ಈ ಸಾಹಿತ್ಯದ ಕೊಡುಗೆ ಕನ್ನಡ ತಾಯಿಗೆ ಕೀರ್ತಿ ತಂದಿದೆ.

ವಾಸ್ತವಿಕತೆಯ ತಳಹದಿಯ ಮೇಲೆ ಅವರು ಬಳಸಿಕೊಂಡ ತಂತ್ರ ಕೌಶಲ್ಯವು ಅ.ನ ಕೃ. ಅವರದೇ ಎನ್ನುವಷ್ಟು ಖಚಿತವಾಗಿದೆ.

ನಾಡು-ನುಡಿಗೆ ಕೊಟ್ಟ ಈ ಕೊಡುಗೆ ಕಾದಂಬರಿ ಸಾಹಿತ್ಯಕ್ಕೆ ಹೊಸ ಜೀವಶಕ್ತಿ.

------

# ಅ.ನ.ಕೃ. ಅವರ ಮಹತ್ವದ ಕಾದಂಬರಿಗಳು

— ಶ್ಯಾಮಸುಂದರ ಬಿದರಕುಂದಿ

ಕನ್ನಡ ಕಾದಂಬರಿ ಬೆಳವಣಿಗೆಯ ಇತಿಹಾಸದಲ್ಲಿ ಅ.ನ.ಕೃಷ್ಣರಾಯರ ಸಾಧನೆ ಸ್ಥೂಲವಾಗಿ ಮಹತ್ತ್ವದ್ದು. ೧೯೩೪ರ ಹೊತ್ತಿಗೆ ಕಾದಂಬರಿಕಾರನಾಗಿ ಅ.ನ.ಕೃ. ಸಾಹಿತ್ಯ ಕ್ಷೇತ್ರಕ್ಕೆ ಕಾಲಿಟ್ಟಾಗ ನಮ್ಮ ಕಾದಂಬರಿ ಸಾಹಿತ್ಯಕ್ಕಿದ್ದುದು ಬರಿ ಮೂರುವರೆ ದಶಕಗಳ ಸೀಮಿತ ಹಿನ್ನೆಲೆ. ಮೊದ ಮೊದಲು ಅಸ್ಪಷ್ಟ ಅಥವಾ ಅಮೂರ್ತ ಅರಿವಿನೊಂದಿಗೆ ಮೈದಳೆದ ಕಲ್ಪಿತಕತೆ (fiction), ಶತಮಾನದ ಆರಂಭದ ಹೊತ್ತಿಗೆ ಸ್ವತಂತ್ರ ರಚನೆ ಮತ್ತು ಅನುವಾದಿತ ಕೃತಿಗಳಿಂದಾಗಿ ತನ್ನದೇ ಆದೊಂದು ನೆಲೆಯನ್ನು ಸಿದ್ಧಗೊಳಿಸಿಕೊಂಡಿತ್ತು. ಗುಲ್ವಾಡಿ ವೆಂಕಟರಾಯ ("ಇಂದಿರಾಬಾಯಿ" ೧೯೦೦); ಬೋಳಾರ ಬಾಬುರಾಯ ("ವಾಗ್ದೇವಿ" ೧೯೦೬); ಕೆರೂರು ವಾಸುದೇವಾಚಾರ್ಯ ("ಇಂದಿರಾ" ೧೯೧೦); ಎಂ. ಎಸ್. ಪುಟ್ಟಣ್ಣ ("ಮಾಡಿದ್ದುಣ್ಣೋ ಮಾರಾಯಾ" ೧೯೧೦)– ಇವರು ಆರಂಭ ಹಂತದಲ್ಲಿ ಸ್ವತಂತ್ರ ಸಾಮಾಜಿಕ ಕಥಾವಸ್ತುಗಳನ್ನು ಪರಿಚಯಿಸಿದ ಪ್ರಮುಖ ಕಾದಂಬರಿಕಾರರು. ಸಮಕಾಲೀನ ಸಮಾಜದ ಲೋಪ-ದೋಷ, ಒಳಿತು-ಕೆಡಕುಗಳನ್ನಿವರು 'ನಾವೆಲ್' ಪ್ರಕಾರ[1] ದಲ್ಲಿ ವಿಮರ್ಶಿಸುವ ಕೆಲಸವನ್ನು ಸಮರ್ಥವಾಗಿ ನಿರ್ವಹಿಸಿದರು.

---

1. ಇಂಗ್ಲೀಷಿನ Novel ಪದಕ್ಕೆ ಮೂಲ nouvella ಎಂಬ ಇಟಾಲಿಯನ್ ಪದ. ಸಾಹಿತ್ಯದ ಹೊಸ ಪ್ರಕಾರವನ್ನು ಇಟಾಲಿಯನ್‌ರು ಒಂದು ವಿಶೇಷಣದ ಮೂಲಕ ಗುರುತಿಸಿದರು. ಇಂಗ್ಲೀಷರು fiction ಗೆ ಬದಲಾಗಿ ಇದನ್ನು ಸ್ವೀಕರಿಸಿದರು ಕನ್ನಡಕ್ಕೆ ಇಂಗ್ಲೀಷಿನ ಪ್ರಭಾವದಿಂದ 'ಕಲ್ಪಿತ ಕತೆ' ಬಂದಾದ ಮೇಲೆ ಕೆಲಕಾಲ 'ನಾವೆಲ್' ಬಳಕೆಯಲ್ಲಿತ್ತು. ಮರಾಠಿಗರು ಈ ಆಧುನಿಕ, ವಿಸ್ತೃತ ಗದ್ಯಕತೆಗೂ ಸಂಸ್ಕೃತದ ಬಾಣಭಟ್ಟನ 'ಕಾದಂಬರಿ' ಗದ್ಯಕಾವ್ಯಕ್ಕೂ ಸಮೀಕರಣ ಕಲ್ಪಿಸಿ ಕಾದಂಬರಿ ಎಂದು ಕರೆಯತೊಡಗಿದರು. ಆಗಿನ ಉತ್ತರ ಕರ್ನಾಟಕದ ಲೇಖಕರು ಮರಾಠೀ ಮರಾಠಿಯ ಈ ಪದವನ್ನು ಕನ್ನಡದಲ್ಲಿ ಪ್ರಚುರಗೊಳಿಸಿದರು.

ಸರಿಸುವವರಾರು ಇದೇ ಕಾಲಾವಧಿಯಲ್ಲಿ ಬಿ. ವೆಂಕಟಾಚಾರ್ಯ ಹಾಗೂ ಗಳಗನಾಥರು ಕ್ರಮವಾಗಿ ಬಂಗಾಳಿ ಮತ್ತು ಮರಾಠಿ ಭಾಷೆಗಳಲ್ಲಿಯ ಆಗಿನ ಜನಪ್ರಿಯ ಕಾದಂಬರಿಗಳನ್ನು[2] ಕನ್ನಡಕ್ಕೆ ಅನುವಾದಿಸಿ ಓದುಗರಲ್ಲಿ ಕಾದಂಬರಿ ವಾಚನದ ಅಭಿರುಚಿಯನ್ನು ಹಬ್ಬಿಸಿದರು. ಕನ್ನಡ ಭಾಷೆ-ಸಾಹಿತ್ಯ ನವೋದಯದ ಹೊಸ್ತಿಲಲ್ಲಿದ್ದ ಆ ಸಮಯದಲ್ಲಿ ಕತೆ, ಕವಿತೆ, ನಾಟಕ, ಪ್ರಬಂಧದಂತಹ ಉಳಿದ ಸಾಹಿತ್ಯ ಪ್ರಕಾರಗಳೂ ತಮ್ಮ ತಮ್ಮ ವಿಶಿಷ್ಟ ಭೂಮಿಕೆಗಳನ್ನು ಕಂಡುಕೊಳ್ಳುತ್ತಿದ್ದವು.

ಮೇಲೆ ಉಲ್ಲೇಖಿಸಿದ ಆರಂಭಕಾಲದ ಲೇಖಕರು ಕಾದಂಬರಿ ಬೆಳವಣಿಗೆಯ ಮೊದಲ ಹಂತದಲ್ಲಿ ರೇಖಿಸಿದ ರೂಪು-ರೇಷೆಗಳಿಗೆ ಸ್ಪಷ್ಟವಾದ, ಹೆಚ್ಚು ಸ್ವತಂತ್ರ ಮತ್ತು ಸಹಜವಾದ ಒಳಸ್ವರೂಪವನ್ನು ಮೂಡಿಸುವ ಹೊಣೆ ಎರಡನೆಯ ಘಟ್ಟದ ಲೇಖಕರ ಮೇಲೆ ಇದ್ದಿತು. ಕಾದಂಬರಿಯು ಒಂದು ಕಾಲದ ಜನಸಮುದಾಯದ ಆಗು-ಹೋಗುಗಳಿಗೆ, ಸುಪ್ತ ಮಿಡಿತಗಳಿಗೆ, ಒಟ್ಟಾರೆ ಸಾಂಸ್ಕೃತಿಕ ಅಸ್ತಿತ್ವಕ್ಕೆ ಲಾಲಿತ್ಯಪೂರ್ಣವಾದ ಕಥನಭಿತ್ತಿಯೊಂದರ ಮೂಲಕ ಅಭಿವ್ಯಕ್ತಿ ಒದಗಿಸುವ ಜನಪ್ರಿಯ ಮಾಧ್ಯಮವಾಗಿ ಬೆಳೆದು ನಿಲ್ಲುವುದಕ್ಕೆ ಸಂದರ್ಭ ಕಾಯ್ದು ನಿಂತಿತ್ತು. ದೇವುಡು ("ಅಂತರಂಗ")[3], ಶಿವರಾಮ ಕಾರಂತ, ಆನಂದಕಂದ, ಅ.ನ.ಕೃ. ರಂತಹ ಮಹತ್ತ್ವಾಕಾಂಕ್ಷಿ ಲೇಖಕರು ಈ ಪ್ರಕಾರವನ್ನು ಅದರ ಎಲ್ಲ ಸಾಧ್ಯತೆಗಳೊಂದಿಗೆ ಬಳಸಿಕೊಳ್ಳುವ ಪ್ರಯತ್ನಕ್ಕೆ ತೊಡಗಿದರು. ತಮ್ಮ ಸೃಜನಶೀಲ ಪ್ರತಿಭೆಯನ್ನು ಕಾದಂಬರಿಯ ಮೂಲಕವೇ ಹೊಮ್ಮಿಸಲು ಅ.ನ.ಕೃ. ಅವರು ಪ್ರಯತ್ನಿಸಿದುದು ಆಗಿನ ಮಟ್ಟಿಗೆ ಕನ್ನಡದ ಒಂದು ಸಂದರ್ಭ

---

2 ಬಿ. ವೆಂಕಟಾಚಾರ್ಯರು ಬಂಗಾಳಿ ಕಾದಂಬರಿ ಪಿತಾಮಹ ಬಂಕಿಂಚಂದ್ರರ ಮುಖ್ಯ ಕಾದಂಬರಿಗಳನ್ನು ಅನುವಾದಿಸತೊಡಗಿದರು ಗಳಗನಾಥರು ಮರಾಠಿ ಪಿತಾಮಹ ಅನಂತನಾರಾಯಣ ಆಪಟೆಯವರ ಐತಿಹಾಸಿಕ ಸ್ವದೇಶಾಭಿಮಾನ ಕೆರಳಿಸುವ ಕೃತಿಗಳನ್ನು ಅನುವಾದಿಸಿ, ಪ್ರಕಟಿಸಿ ಮನೆಮನೆಗೂ ಒಯ್ದು ಮಾರಿದರು.

3. ದೇವುಡು ನರಸಿಂಹಶಾಸ್ತ್ರಿಗಳು ಮೊಟ್ಟಮೊದಲಿಗೆ ಕನ್ನಡದಲ್ಲಿ ಮನೋವೈಜ್ಞಾನಿಕ ಪ್ರಮೇಯಗಳನ್ನು ಅನ್ವಯಿಸಿ ಕಾದಂಬರಿಯನ್ನು ಬರೆದರು. ಅದೇ 'ಅಂತರಂಗ'.

ನೆಂದೇ ಎಣಿಸಬೇಕು. ಏಕೆಂದರೆ ಒಂದು ಕಡೆ ಪಾಶ್ಚಾತ್ಯ ಭಾಷೆಗಳ ಆಧುನಿಕ ಸಾಹಿತ್ಯದಿಂದಲೂ ಇನ್ನೊಂದು ಕಡೆ ಭಾರತೀಯ ಸಂಸ್ಕೃತಿ, ಪರಂಪರೆ, ಕಲೆಗಳ ನಿಕಟ ಪರಿಚಯದಿಂದಲೂ ಸಮೃದ್ಧಗೊಂಡ ವ್ಯಕ್ತಿತ್ವ ಅವರದಾಗಿತ್ತು. ಕನ್ನಡ 'ನವೋದಯ'ಕ್ಕೆ ಇವರಂಥ ಪ್ರಜ್ಞಾಶೀಲ ಬರಹಗಾರನ ಕೊಡುಗೆ ಒಂದು ಅವಶ್ಯಕತೆಯೇ ಆಗಿತ್ತು. ಅ.ನ.ಕೃ. ಅವ-ರಂಥವರ ಮುಂಚೂಣಿಯಿಂದ ಕಾದಂಬರಿಯಂಥ ಸಾಹಿತ್ಯ ಪ್ರಕಾರವು ಹೆಚ್ಚು ಪ್ರಖರವೂ ನಿರ್ದುಷ್ಟವೂ ಆಗಿ ಬೆಳೆಯಬಲ್ಲ ನಿರೀಕ್ಷೆಯಿದ್ದಿತು

'ಜೀವನಯಾತ್ರೆ' (೧೯೩೪)ಯಿಂದ ಆರಂಭವಾದ ಅ.ನ.ಕೃ. ಅವರ ಕಾದಂಬರಿ ವ್ಯವಸಾಯವು ಅವರ ನೈಜ ಒಲವು, ಧೋರಣೆ, ಅಭಿವ್ಯಕ್ತಿಯ ವೈಶಿಷ್ಟ್ಯವನ್ನು ಪ್ರಕಟಪಡಿಸಿದ್ದು 'ಸಂಧ್ಯಾರಾಗ' (೧೯೩೫)ದ ರಚನೆಯಲ್ಲಿ. ವಸ್ತು, ಶೈಲಿ, ಸಂಭಾಷಣೆಯ ಹಣಿಕೆ –ಇವೆಲ್ಲದರಲ್ಲೂ ಕನ್ನಡ ಕಾದಂಬರಿಗೆ ತೀರ ಹೊಸತಾದ ಸೊಬಗನ್ನು ಸಹಜವಾದ ಕಳೆಯನ್ನು ತಂದು ಕೊಟ್ಟದ್ದೇ 'ಸಂಧ್ಯಾರಾಗ'. ಅದಕ್ಕೆ ಮುಂಚಿನ ಸಾಮಾಜಿಕ ಕಾದಂಬರಿಗಳಲ್ಲಿ ಸಮಕಾಲೀನ ವಾತಾವರಣವನ್ನು ಕೂಡ ಕಾಲ್ಪನಿಕವಾದ ರಮ್ಯತೆ, ಗ್ರಂಥಸ್ಥ ಮಾದರಿಯ ನಾಟಕೀಯತೆಯಲ್ಲಿ ವರ್ಣಿಸುವ ಆ ರೀತಿಯೇ ರೂಢಿಯಲ್ಲಿತ್ತು. ಕಾದಂಬರಿಯಲ್ಲಿ ರೂಪುಗೊಳ್ಳುವ ಒಳಜೀವನಕ್ಕೆ ವಾಸ್ತವದ ಸಹಜ ರೂಪಕೊಟ್ಟು, ಅದನ್ನು ಓದುಗರ ಸಮೀಪಕ್ಕೆ ತಂದ ಶ್ರೇಯಸ್ಸು ಅ.ನ.ಕೃ. ಅವರದು. ಸ್ವತಃ ಕುಶಲ ಕತೆಗಾರರೇ ಆಗಿದ್ದರಿಂದ, ಯಶಸ್ವೀ ನಾಟಕಗಳ ರಚನೆಯಲ್ಲಿ ಅವರ ಕೈ ಆಗಲೇ ಪಳಗಿದ್ದುದರಿಂದ ಸುಲಲಿತ ಶೈಲಿ ಅವರಿಗೆ ಸಹಜವಾಯಿತು. ಮುಂದೆ, ಬಹುಕಾಲ ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಅ.ನ.ಕೃ.ರ ಈ ವಿಶಿಷ್ಟ, ಸೊಬಗಿನ ಶೈಲಿ ಅನೇಕರಿಗೆ ಸುಲಭ ಅನುಕರಣೆಯ ಸಾಧನವಾಯಿತು. ಇದು ಸಿದ್ಧಶೈಲಿಗೆ ಹಾದಿ ಮಾಡಿಕೊಟ್ಟು ಬರವಣಿಗೆಯನ್ನು ಹಗುರಗೊಳಿಸಿತು. ಇಷ್ಟೇ ಅಲ್ಲ, ಓದುಗರನ್ನು ಮೋಡಿಗೊಳಿಸುವ ತಮ್ಮ ಲೇಖನಿಯ ಈ ಜಾಡನ್ನು ಸ್ವತಃ ಅ.ನ.ಕೃ. ಎಗ್ಗಿಲ್ಲದೆ ಬಳಸಿ ವ್ಯವಸಾಯಿ ಸಾಹಿತಿ ತನ್ನ ಸೃಜನಶೀಲತೆಗೆ ತಂದುಕೊಳ್ಳುವ ದುಸ್ಥಿತಿಗೂ ಉದಾಹರಣೆಯಾಗಿ ಉಳಿದರು.

   

೧೯೩೪–೧೯೭೧ರ ನಡುವಿನ ಸು. ಮೂರುವರೆ ದಶಕಗಳ ಕಾಲಾವಧಿಯಲ್ಲಿ ಅ.ನ.ಕೃ. ಬರೆದು ಪ್ರಕಟಿಸಿದ್ದು ೧೧೨ ಕಾದಂಬರಿಗಳನ್ನು. ಇವುಗಳಲ್ಲಿ ೧೫ ಐತಿಹಾಸಿಕ ವಸ್ತು ಆಧಾರಿತವಾಗಿದ್ದರೆ, ಉಳಿದ ೯೭ ಸಾಮಾಜಿಕ, ಕೌಟುಂಬಿಕ, ಸಮಕಾಲೀನ ರಾಜಕೀಯ ಸ್ವರೂಪದ ಕಾದಂಬರಿಗಳು.[4] ಮೂವತ್ತಾರು ವರ್ಷಗಳ ಅ.ನ.ಕೃ. ಕಾದಂಬರಿ ಸಾಹಿತ್ಯ ಸಾಧನೆ ಬೆಳವಣಿಗೆಯನ್ನು ಮೂರು ಘಟ್ಟಗಳಲ್ಲಿ ಗಮನಿಸಬಹುದು.

೧. **ಮೊದಲ ಹತ್ತು ವರ್ಷಗಳು** (೧೯೩೪–೪೪): ಈ ಅವಧಿಯಲ್ಲಿ ಬಂದ ಕಾದಂಬರಿಗಳಲ್ಲಿ ಪರಂಪರಾಗತ ಜೀವನ ಮೌಲ್ಯಗಳ ಬಗ್ಗೆ ಅವರಿಗಿದ್ದ ಆದರ, ಅವಲಂಬನೆ ಎದ್ದು ಕಾಣುವ ಅಂಶ ಕುಟುಂಬ ಜೀವನದ ಆದರ್ಶ. ಕೌಟುಂಬಿಕ ವ್ಯಕ್ತಿಗಳ ಋಜುತ್ವ, ತ್ಯಾಗ, ಸಹನೆ, ಮಹತ್ತ್ವಕಾಂಕ್ಷೆಯ ಕಡೆಗಿನ ವ್ಯಕ್ತಿಯ ತುಡಿತ; ನಾಟಕ–ಸಂಗೀತ–ಕಲೆಗಳಿಗೆ ತನ್ನನ್ನು ಅರ್ಪಿಸಿಕೊಂಡ ಕಲಾವಿದನ ಸಂವೇದನೆ, ಸಾಧನಗಳ ಏರಿಳಿತ; ಕುಟುಂಬಗಳ ಒಳ ಸಂಬಂಧಗಳಲ್ಲಿ ಏರ್ಪಡುವ ವಾತ್ಸಲ್ಯ, ಹಗೆತನಗಳ ಸಂಘರ್ಷ– ಇವು ಮುಖ್ಯ ಆಸಕ್ತಿಗಳಾಗಿ ಬರುತ್ತವೆ. ಸಂಧ್ಯಾರಾಗ, ಉದಯರಾಗ, ಕಣ್ಣೀರು, ಗೃಹಲಕ್ಷ್ಮಿ, ನಟಸಾರ್ವಭೌಮ ಇವು ಮುಖ್ಯ ಕಾದಂಬರಿಗಳು.

೨. **ನಡುವಿನ ಹತ್ತು ವರ್ಷಗಳು** (ಸು. ೧೯೪೫-೧೯೫೫): 'ಪ್ರಗತಿಶೀಲ ಚಳುವಳಿ'ಯ ಪ್ರಭಾವದ ಕಾಲ. ಕಾರ್ಮಿಕರ, ವೇಶ್ಯೆಯರ ಶೋಷಣೆಯ ವಿರುದ್ಧ ಎತ್ತಿದ ಧ್ವನಿ; ಪೋಷಣಾಪ್ರಧಾನ ಬರವಣಿಗೆ; ಆಕ್ರೋಶಪೂರ್ಣ ವಿಚಾರಗಳ. ಚರ್ಚಾಸ್ಪದ ವಿಷಯಗಳ ಮಂಡನೆ; ವಾದಗ್ರಸ್ತ ಪರಿಸ್ಥಿತಿಯನ್ನೆದುರಿಸುತ್ತ ಸಾತ್ವಿಕ ಸಂತಾಪವನ್ನು ಬಹಿರಂಗವಾಗಿ ಪ್ರಕಟಿಸಿದ ಕಾಲಾವಧಿ. 'ನಗ್ನಸತ್ಯ,' 'ಶನಿಸಂತಾನ,' 'ಸಂಜೆಗತ್ತಲು', 'ಅಪರಂಜಿ', 'ಸಾಹಿತ್ಯರತ್ನ', 'ಕನ್ನಡಮ್ಮನ ಗುಡಿಯಲ್ಲಿ' ಇತ್ಯಾದಿ ಕಾದಂಬರಿಗಳ ರಚನೆ.

---

4. ವಿಶ್ವಕೋಶ ಸಂ. ೪ರಲ್ಲಿಯ ಉಲ್ಲೇಖ.

**೩. ಕೊನೆಯ ಹದಿನೈದು ವರ್ಷಗಳು (೧೯೫೬–೧೯೭೧):** ಮೇಲಿನ ಎರಡೂ ಕಾಲಾವಧಿಯಲ್ಲಿ ಪ್ರಸ್ತಾಪಗೊಂಡ ಕಥಾವಸ್ತು, ಸಮಸ್ಯೆ, ನಿಲುವು ಮತ್ತು ನಿರೂಪಣಾ ಧಾಟಿಗಳ ಚರ್ವಿತ ಚರ್ವಣದ ಕೃತಿಗಳು. ಸ್ವಾತಂತ್ರ್ಯೋತ್ತರದ ದೇಶದಲ್ಲಿ ಕಾಣಿಸಿಕೊಂಡ ರಾಜಕೀಯ ಭ್ರಷ್ಟಾಚಾರ, ಮುಖಂಡರ ತತ್ತ್ವಭ್ರಷ್ಟ ನಡಾವಳಿ, ಪಟ್ಟಭದ್ರಹಿತಾಸಕ್ತಿಗಳ ಶೋಷಕ ಪ್ರವೃತ್ತಿ, ಲಂಚಗುಳಿತನ– ಈ ಮೊದಲಾದ ಮೇಲ್ತೋರಿದ ವ್ಯಾಧಿಗಳನ್ನು ಪ್ರಸ್ತಾಪಿಸಿದ್ದರೂ ಬರವಣಿಗೆಯ ಹಗುರತನದಿಂದಾಗಿ ಇವು ಯಾವವೂ ಸ್ಮರಣಾರ್ಹವಾಗಿ ಉಳಿಯಲಾರವು. 'ಆ ದಾರಿ– ಈ ದಾರಿ', 'ಕಾಮಿನಿ ಕಾಂಚನ', 'ನರ–ನಾರಾಯಣ', 'ಮಿಯಾ ಮಲ್ಹಾರ', 'ಏಣಾಕ್ಷಿ.' 'ಮಾರ್ಜಾಲ ಸನ್ಯಾಸಿ', 'ಹೊಸಿಲು ದಾಟಿದ ಹೆಣ್ಣು', ಮುಂ. ಗಳು ಅ.ನ.ಕೃ. ಅವರ ಕಾದಂಬರಿ ಬರವಣಿಗೆ ಯಾಂತ್ರಿಕವೂ ಅವರು ಪ್ರಸ್ತಾಪಿಸುವ ಅಂಶಗಳು ಚರ್ವಿತ ಚರ್ವಣವೂ ಆಗಿವೆ, ಎಂಬುದಕ್ಕೆ ನಿದರ್ಶನವಾಗುತ್ತವೆ.

ಐತಿಹಾಸಿಕ ತಲೆಕಟ್ಟಿನಲ್ಲಿ ಅ.ನ.ಕೃ. ಬರೆದ ಕಾದಂಬರಿಗಳಲ್ಲಿ ಕೂಡ ಓದುಗನನ್ನು ಸುಲಭವಾಗಿ ಸೆಳೆಯುವ ಕಥನ ಅಂಶದ ಕಡೆಗೇ ಅವರು ಒತ್ತು ಕೊಟ್ಟಿರುವುದು ಎದ್ದು ಕಾಣುತ್ತದೆ. ಇತಿಹಾಸದ ಪ್ರಜ್ಞೆಯನ್ನಾಗಲಿ, ವರ್ತಮಾನಕ್ಕೆ ಇತಿಹಾಸದ ಪ್ರಸ್ತುತತೆಯನ್ನಾಗಲಿ ಅವರು ಈ ಕೃತಿಗಳ ಮೂಲಕ ಪ್ರಕಟಿಸಲಿಲ್ಲ. ವೈಯಕ್ತಿಕವಾಗಿ ಅ.ನ.ಕೃ. ಚಿಂತನಶೀಲ ವ್ಯಕ್ತಿಯಾಗಿದ್ದರು. ಸಾಹಿತ್ಯದ ಗುರಿ, ಅದರ ಕಲಾತ್ಮಕ ಪ್ರಭಾವದ ಬಗ್ಗೆ ಅವರಿಗೆ ಸ್ಪಷ್ಟವಾದ ಅರಿವು ಇತ್ತು. ಬಹು ಭಾಷೆಗಳ ಸಾಹಿತ್ಯದ ಅಧ್ಯಯನದಿಂದ ಅವರ ಬುದ್ಧಿ ಹರಿತವಾಗಿತ್ತು. ರಾಷ್ಟ್ರೀಯ, ಅಂತ ರ್ರಾಷ್ಟ್ರೀಯ, ರಾಜಕೀಯ, ಸಾಮಾಜಿಕ ಸಮಸ್ಯೆಗಳನ್ನು, ವಿದ್ಯಮಾನಗಳನ್ನು ವಿಮರ್ಶಿಸಬಲ್ಲ ವಿವೇಚನಾಶಕ್ತಿ ಅವರಿಗಿತ್ತು. ಅಂದಂದಿನ ಜೀವನದ ಆಗು–ಹೋಗುಗಳನ್ನು ಗಮನಿಸುತ್ತ ತುರ್ತಾಗಿ ವ್ಯಾಖ್ಯಾನಿಸುವ ಒಬ್ಬ ಸಮರ್ಥ ಪತ್ರಕರ್ತನಿಗಿರಬೇಕಾದ ಚುರುಕುತನ, ಸದ್ಯತನ ಅವರ ಬರವಣಿಗೆಗೆ ಸಾಧ್ಯವಾಗಿತ್ತು. ಇದರ ಪರಿಣಾಮ ಅವರ ಸೃಜನಶೀಲ ಸಾಹಿತ್ಯದ ಮೇಲೆ ಆಗದೆ ಉಳಿಯಲಿಲ್ಲ. ಅ.ನ.ಕೃ. ಅವರ ಅಸಂಖ್ಯ ಕಾದಂಬರಿ

ಗಳಲ್ಲಿ ಕೆಲವೇ ಕೆಲವು ಉದಾ : 'ಸಂಧ್ಯಾರಾಗ', 'ಕಣ್ಣೀರು', 'ಗೃಹಲಕ್ಷ್ಮಿ' 'ನಟಸಾರ್ವಭೌಮ', 'ನಗ್ನಸತ್ಯ'ದ ಮೂರು ಭಾಗಗಳು- ಮಾತ್ರ ಗಮನಾರ್ಹವಾಗಿ ಉಳಿಯುತ್ತವೆ. ಇದೂ ಕೂಡ ಅವುಗಳ ಸಾಹಿತ್ಯದ ಉತ್ಕೃಷ್ಟ ಗುಣಕ್ಕಾಗಿ ಅಲ್ಲ; ಅವು ತಾವು ಪ್ರಕಟಗೊಂಡ ಕಾಲಾವಧಿಯಲ್ಲಿ ಅನನ್ಯವಾದ ಜೀವನಾನುಭವವನ್ನು, ವಿಶಿಷ್ಟ ದೃಷ್ಟಿಕೋನವನ್ನು ಪ್ರಕಟಪಡಿಸಿದವು ಎನ್ನುವ ಕಾರಣಕ್ಕಾಗಿ.

   

**'ಸಂಧ್ಯಾರಾಗ'** : ಲಕ್ಷ್ಮಣನೆಂಬ ಗಾಯಕನ ಕತೆ. ಈ ಕಾದಂಬರಿಯ ಮುಖ್ಯ ಆಶಯವಾಗಿದ್ದರೂ ಅ.ನ.ಕೃ. ಕಂಡ ಒಂದು ಸುಸಂಸ್ಕೃತ ಕುಟುಂಬದ ಏಳು-ಬೀಳುಗಳು, ಗೃಹಿಣಿಯರ ಋಜುಜೀವನದ ಬಗ್ಗೆ ಅವರಿಗಿದ್ದ ಅಸದೃಶ ಗೌರವ ಭಾವನೆಗಳಿಗೆ ಇಲ್ಲಿ ಪ್ರಾಧಾನ್ಯವಿದೆ. ಊಳಿಗಮಾನ್ಯ ಪದ್ಧತಿ ಅಳಿದು ಹೋಗುತ್ತಿರುವುದರ ಚಿತ್ರಣವನ್ನು ಅ.ನ.ಕೃ. ಆನುಷಂಗಿಕವಾಗಿ ಪ್ರಸ್ತಾಪಿಸಿದರೂ ಆದರ ಕಾರಣ- ಪರಿಣಾಮಗಳ ಕಡೆಗೆ ಅವರಿಗೆ ಲಕ್ಷ್ಯವಿಲ್ಲ. ಹೊಸಳ್ಳಿಯಿಂದ ಬೆಂಗಳೂರಿಗೆ ವಲಸೆ ಬಂದ ಜಮೀನುದಾರ ಶ್ರೀನಿವಾಸರಾಯರು ಮಕ್ಕಳಿಗಾಗಿ ಪಡುವ ಆಕಾಂಕ್ಷೆ, ಕ್ರಮೇಣ ಬೆಳೆದ ಮಕ್ಕಳ ಪ್ರವೃತ್ತಿಗಳಿಂದಾಗಿ ಒಡೆಯುವ ಅವಿಭಕ್ತ ಕುಟುಂಬದ ಬಾಂಧವ್ಯ, ಇದರಿಂದಾಗಿ ಉಂಟಾಗುವ ಒಳಿತು ಕೆಡಕುಗಳ ನಡುವಿನ ಸಂಘರ್ಷ, ಹೆಣ್ಣಿನ ಕೋಮಲ ತ್ಯಾಗ ಮನೋಭಾವ-ಇವು ಒಂದೊಂದಾಗಿ ಬಿಚ್ಚಿಕೊಳ್ಳುತ್ತವೆ. ಇವಕ್ಕೆಲ್ಲ ಭಿನ್ನವಾಗಿ ಬೆಳೆಯುವ ಲಕ್ಷ್ಮಣನ ಸಂಗೀತ ಸಾಧನೆ, ಸಿದ್ಧಿಯ ಹೃದಯಸ್ಪರ್ಶಿ ಕತೆ, ಕೃತಿಯನ್ನಾವರಿಸಿದೆ.

'ಸಂಧ್ಯಾರಾಗ' ದಲ್ಲಿ ಅ.ನ.ಕೃ. ಆದರ್ಶದ ಪರಿಣಾಮವನ್ನು ಕತೆ ಮಾಡಿ ಹೇಳುತ್ತಾರೆ. ವಾಸ್ತವದಲ್ಲಿ ಆದರ್ಶಗುಣ-ನಡಾವಳಿಗಳಿಗಿರುವುದು ದುಃಖ-ದುಮ್ಮಾನ-ಬವಣೆಗಳ ಅನಿವಾರ್ಯ ಪಾಡು. ಲಕ್ಷ್ಮಣ ಮತ್ತು ಅವನ ಹೆಂಡತಿ ಜಯಲಕ್ಷ್ಮಿ ಪಡುವ ಕಾರ್ಪಣ್ಯಗಳು ಕತೆಯನ್ನು ಹೃದಯಸ್ಪರ್ಶಿಯಾಗಿಸುತ್ತವೆ. ಆದರ್ಶದ ಪ್ರತಿಪಾದನೆಯಲ್ಲಿ ಕಾದಂಬರಿಕಾರ ಅನುಸರಿಸುವುದು "ಹೇಳಿಕೆಗಳ" ಮಟ್ಟದ ನಿರೂಪಣೆಯನ್ನು. ಪಾತ್ರ ಮತ್ತು ಸನ್ನಿವೇಶಗಳ ನಿರ್ಮಾಣದಲ್ಲಿ, ಬೆಳವಣಿಗೆಯಲ್ಲಿ ನಿರೂಪಕನೇ ಮುಖ್ಯನಾಗಿ, ಅವುಗಳಿಗೆ ಸ್ವಾತಂತ್ರ್ಯವಿರುವುದಿಲ್ಲ. ಮಾನವೀಯ 'ಪ್ರವೃತ್ತಿಗಳ ಒಳ

ಮಗ್ಗುಲುಗಳನ್ನು ನೋಡುವ ಶ್ರಮವನ್ನು ಈ ನಿರೂಪಕ ವಹಿಸುವುದಿಲ್ಲ. ಶೋಧಕ ದೃಷ್ಟಿಯ ಕೊರತೆಯಿಂದ ಕಾದಂಬರಿಯೊಳಗೆ ಮೂಡುವ ಬದುಕು ವಿಶ್ವಾಸಾರ್ಹತೆಯನ್ನು ಗಳಿಸದೇ ಉಳಿಯುತ್ತದೆ. ಚುರುಕಾದ, ಗರಿಗರಿಯಾದ ನಿರೂಪಣಾ ಶೈಲಿಯಲ್ಲಿ ಕಾದಂಬರಿಯ ಈ ಮುಖ್ಯಕೊರತೆಯು ಅಡಗಿ ಹೋಗುತ್ತದೆ. ಹೀಗಿದ್ದರೂ 'ಸಂಧ್ಯಾರಾಗ' ಆ ದಶಕದಲ್ಲಿ ಓದುಗ ಮತ್ತು ವಿಮರ್ಶಕ ಇವೆರಡೂ ದೃಷ್ಟಿಗಳಿಂದ ಒಂದು ಸಫಲ ಕೃತಿಯಾಗಿ ಕಾಣಲು ಕಾರಣಗಳಿವೆ: ಕಾಲ್ಪನಿಕ ಅಥವಾ ರಮ್ಯ ಕಥಾವಸ್ತುಗಳಿಂದ, ಐತಿಹಾಸಿಕವಾದ ಜೀವನ ದೂರಕತೆಗಳಿಂದ ಇಡಿಕಿರಿದಿದ್ದ ಅಂದಿನ ಕಾದಂಬರಿಗಳ ಸಂದರ್ಭದಲ್ಲಿ ಅ.ನ.ಕೃ. ಅವರು ಸೃಷ್ಟಿಸಿದ ಲಾಲಿತ್ಯಪೂರ್ಣವಾದ ಮತ್ತು ವಾಸ್ತವಕ್ಕೆ ಹತ್ತಿರವಿರುವ ಇಲ್ಲಿಯ ಕತೆ, ಭಾಷೆ, ಪಾತ್ರಗಳು ಕಾದಂಬರಿ ಬರವಣಿಗೆಗೆ ಒದಗಿಸಿದ ಭಿನ್ನ ಆಯಾಮ ನೆನಪಿಡುವಂತಹದು.

'ಕಣ್ಣೀರು' ಮತ್ತು 'ಗೃಹಲಕ್ಷ್ಮಿ': ಇವೆರಡೂ ಕೌಟುಂಬಿಕ ಕಾದಂಬರಿಗಳು. ಅ.ನ.ಕೃ. ಅವರ ಕುಟುಂಬ ಜೀವನ ದೃಷ್ಟಿಯನ್ನು, ಅದರಲ್ಲೂ ಸಂಸಾರ ನಿರ್ವಹಣೆಯಲ್ಲಿ ಹೆಣ್ಣಿನ ಪಾತ್ರದ ಬಗ್ಗೆ ಅವರಿಟ್ಟುಕೊಂಡ ಆದರ್ಶ ಕಲ್ಪನೆಯನ್ನು ಹೃದಯಂಗಮವಾಗಿ ನಿರೂಪಿಸುತ್ತವೆ. ಹೆಣ್ಣನ್ನು ಪರಂಪರಾಗತ ಧಾರ್ಮಿಕ, ಸ್ಮೃತಿಕ ಚೌಕಟ್ಟಿನಲ್ಲೇ ಇರಿಸಬಯಸುವ ಅ.ನ.ಕೃ., ಪ್ರಚ್ಛನ್ನವಾಗಿ ಸಂಪ್ರದಾಯವಾದಿಯೇ ಆಗಿದ್ದರೆಂಬುದಕ್ಕಿವು ಸ್ಪಷ್ಟ ಉದಾಹರಣೆಯಾಗಿವೆ.[೫]

---

೫ ಅ.ನ.ಕೃ. ಪ್ರಗತಿಶೀಲ ಚಳುವಳಿಯ ಕಾವಿನಲ್ಲಿದ್ದಾಗಲೇ ಬರೆದ 'ಹೊಸಿಲು ದಾಟಿದ ಹೆಣ್ಣು' ಕಾದಂಬರಿ ಅವರ ಪ್ರಗತಿಶೀಲ ಪ್ರಣಾಳಿಕೆಯ ಆಭಾಸವನ್ನು ಎತ್ತಿ ತೋರಿಸುವಂತಿದೆ. ಈ ಕಾದಂಬರಿಯ ನಾಯಕಿ ಗೋದಾವರಿಯ ಸ್ವಾತಂತ್ರ್ಯದ ಹಂಬಲವನ್ನವರು ದಿಟ್ಟಿಸಿದ್ದು ಪ್ರಗತಿಪರ ನಿಲುವಿನಿಂದಲ್ಲವೇ ಅಲ್ಲ. ಸಾಮಾಜಿಕ ಸೇವೆ, ರಾಜಕೀಯ ರಂಗಕ್ಕೆ ಹೋಗುವ ಕಲಿತ ಹೆಣ್ಣು ತನ್ನ ಶೀಲ, ವ್ಯಕ್ತಿತ್ವ ಕಳೆದುಕೊಳ್ಳದೇ ಅನ್ಯಗತಿಯಿಲ್ಲ ಎಂಬುದನ್ನು ಅವರು ಸಾಬೀತುಪಡಿಸುತ್ತಾರೆ. ಹೆಣ್ಣು, ಆಧುನಿಕ ಕಾಲದಲ್ಲೂ ಹೊಸಿಲ ಒಳಗೇ ತನ್ನ ಅರ್ಥವಂತಿಕೆಯನ್ನು ಕಂಡುಕೊಳ್ಳಬೇಕೆಂಬ ಅ.ನ.ಕೃ. ಅವರ ಇಲ್ಲಿಯ ಆಶಯ ಅವರ ಪ್ರಗತಿಶೀಲ ಮನೋಧರ್ಮದ ಪ್ರಾಮಾಣಿಕತೆಯನ್ನೇ ಪ್ರಶ್ನೆ ಮಾಡುವಂತಿದೆ. ಇದರಿಂದ ವಿರೋಧಾಭಾಸಗಳು ಅವರ ಮುಂದಿನ 'ಯಾಂತ್ರಿಕ ಬರವಣಿಗೆ'ಯಲ್ಲಿ ಸಿಗುವುದು ಮಾಮೂಲಾಗಿ ಬಿಟ್ಟಿತು.

ಪಾತ್ರಚಿತ್ರಣದ ದೃಷ್ಟಿಯಿಂದ ಇವೆರಡೂ ಕಾದಂಬರಿಗಳಲ್ಲಿಯ ಕೆಲವು ಪಾತ್ರಗಳು ನೆನಪಿಡುವಂತಿವೆ. ಅಕ್ಷರಶಃ 'ಕಣ್ಣೀರು' ತರಿಸುವ ಕಾಮಾಕ್ಷಿ, ಗೌರಿಯರ ವ್ಯಕ್ತಿತ್ವಗಳು ಮಧ್ಯಮ ವರ್ಗದ ಬ್ರಾಹ್ಮಣ ಕುಟುಂಬಗಳ ಆಶೆ-ಆಕಾಂಕ್ಷೆಗಳ ಪ್ರತೀಕವಾಗಿವೆ. ವರದಕ್ಷಿಣೆಯ ಪಿಡುಗಿನ ದುಷ್ಪರಿಣಾಮವನ್ನು ಚರ್ಚಿಸುವ 'ಕಣ್ಣೀರು', ಹೆಣ್ಣಿನ ಸಹನೆ, ತ್ಯಾಗಗಳಿಂದಲೇ ಗಂಡು ಸುಧಾರಿಸುವನೆಂಬುದನ್ನು ಮನವರಿಕೆ ಮಾಡಿ ಕೊಡುತ್ತದೆ. ಕಾದಂಬರಿಕಾರರ ಅನುಕಂಪಕ್ಕೆ ಹೆಣ್ಣು ಪಾತ್ರಳಾಗಿದ್ದರೂ ಅವಳನ್ನು ದುರ್ಬಲಗೊಳಿಸುವುದರಲ್ಲೇ ಅವರು ಸಮಸ್ಯೆಗೆ ಸಮಾಧಾನ ಕಂಡು ಕೊಳ್ಳುತ್ತಾರೆ.

'ಗೃಹಲಕ್ಷ್ಮಿ'ಯ ರುಕ್ಮಿಣಿಯಲ್ಲಿ ಅ.ನ.ಕೃ. ಕಂಡದ್ದು ಆದರ್ಶ ಗೃಹಿಣಿಯ ಪ್ರತೀಕವನ್ನು. ಬಾಳಿನಲ್ಲಿ ಎದುರಾಗುವ ವ್ಯಕ್ತ ಮತ್ತು ಅಗೋಚರವಾದ ಕೆಡಕುಗಳನ್ನು ತಾಳ್ಮೆ, ಔದಾರ್ಯಗಳಿಂದ ಎದುರಿಸುವ ರುಕ್ಮಿಣಿ, ಒಳಿತನ್ನೇ ನಂಬಿ ಜೀವನ ಸವೆಸುತ್ತಾಳೆ. ಪರಂಪರಾಗತ ಭಾರತೀಯ ಪರಂಪರೆಯ ಹೆಣ್ಣು, ಮುಂದೆಯೂ ಕೂಡ ತನ್ನ ಈ ಪಾತ್ರವನ್ನು ಹೀಗೆ ಮುಂದುವರಿಸುವುದರಲ್ಲೇ ಶ್ರೇಯಸ್ಸಿದೆ ಎನ್ನುವ ನಂಬಿಕೆಯನ್ನು ಕಾದಂಬರಿಕಾರರು ಸ್ಥಾಪಿಸಿದ್ದಾರೆ. ಇಲ್ಲಿಯೂ ಕೂಡ ಭಾವುಕ ಸನ್ನಿವೇಶಗಳೇ ಕಾದಂಬರಿಯ ಜೀವಾಳವಾಗಿ ಓದುಗರನ್ನು ಮುಗ್ಧಗೊಳಿಸುತ್ತವೆ.

**'ನಟಸಾರ್ವಭೌಮ'**: ಬರಹಗಾರನಾಗಿ ಅ.ನ.ಕೃ. ಅವರಿಗೆ ಜೀವನದ ಇತರ ಕಲಾ ಪ್ರಕಾರಗಳಲ್ಲಿದ್ದ ಆಸಕ್ತಿ, ಆತ್ಮೀಯ ಸಂಬಂಧಗಳು ಅಪಾರ. ಅವರದು ಕಲೋಪಾಸಕರ ಮನೆತನ. ನಟ, ಸಂಗೀತಗಾರ, ನೃತ್ಯಕಾರ, ಚಿತ್ರಕಾರರ ಹತ್ತಿರದ ನಂಟು, ಸ್ನೇಹ ಕೃಷ್ಣರಾಯರಿಗೆ. ಈ ನಿಟ್ಟಿನಲ್ಲಿ ಕಂಡ ನೋಟಗಳನ್ನು, ವ್ಯಕ್ತಿಗಳ ಚರಿತ್ರೆಯನ್ನು ಕಾದಂಬರಿಯಾಗಿಸುವ ಹಂಬಲ ಇವರಲ್ಲಿ ಸದಾ ತುಂಬಿರುತ್ತಿತ್ತು. ಕಲಾವಿದರು ಮತ್ತು ಕಲಾಸಂಸ್ಥೆಗಳ ಒಳ-ಹೊರಗುಗಳನ್ನು ಸವಿವರವಾಗಿ, ಯಥಾರ್ಥವಾಗಿ ಕಂಡು ಚಿತ್ರಿಸಿದವರು ಅ.ನ.ಕೃ.ರನ್ನುಳಿದರೆ ಕನ್ನಡದಲ್ಲಿ ಬೇರೊಬ್ಬರಿಲ್ಲ. ಆಗಿ ಹೋದ ದಶಕಗಳಲ್ಲಿ ಕನ್ನಡ ರಂಗಭೂಮಿಯ ಕಲಾವಿದ

ವರದಾಚಾರ್ಯರ ನಾಟ್ಯಸಾಧನೆ ಚಿರಸ್ಮರಣೀಯ. ಅವರೊಂದಿಗೆ ನಿಕಟ ವಾಗಿದ್ದ ಕೃಷ್ಣರಾಯರಿಗೆ ಮಹಾನ್ ಕಲಾವಿದನ ವೈಯಕ್ತಿಕ ಮತ್ತು ಕಲಾತ್ಮಕ ಜೀವನ ಪರಿಯನ್ನು ಭವ್ಯವಾಗಿ, ವಿಸ್ತೃತವಾಗಿ ಕಾದಂಬರಿ ಯಾಗಿಸಬೇಕೆಂದು ಆಸೆಯಾಗುವುದು ಸಹಜ. ಇದರ ಪರಿಣಾಮವಾಗಿಯೇ 'ನಟಸಾರ್ವಭೌಮ' ದ ಮೂರು ಸಂಪುಟಗಳು ಕಾದಂಬರಿ ರೂಪ ತಳೆದವು.

ಅ.ನ.ಕೃ. ರ ಮಟ್ಟಿಗೆ 'ನಟಸಾರ್ವಭೌಮ' ಮಹತ್ತ್ವಾಕಾಂಕ್ಷೀ ಕೃತ. ಕಥಾನಾಯಕ ರಾಜಾಚಾರ್ಯನ ಬಾಲ್ಯದ ಹವ್ಯಾಸಗಳಾದ ನಟನೆ, ಗಾಯನಗಳ ಚಿತ್ರವತ್ತಾದ ವರ್ಣನೆಯಿಂದ ಶುರುವಾಗುವ ಕಲೆ, ಆತನ ಸ್ವಭಾವ, ಮನೋಭಾವ ರೂಪುಗೊಳ್ಳುವ ಬಗೆಗಳನ್ನು ವಿವರವಿವರವಾಗಿ ತೋರಿಸುತ್ತ ಮುಂದುವರಿಯುತ್ತದೆ. ಕಲಾವಿದ್ಯೆ ಒಂದು ತಪಸ್ಸು. ಇದಕ್ಕೆ ಪೋಷಕವಾಗಿಯೂ, ಮಾರಕವಾಗಿಯೂ ತದ್ವಿರುದ್ಧ ಗುಣ ಸ್ವಭಾವಗಳ ಹೆಣ್ಣುಗಳು ರಾಜಾಚಾರ್ಯನ ಯೌವ್ವನದಲ್ಲಿ ಕಾಲಿರಿಸುತ್ತವೆ. ರಾಜಾಚಾರ್ಯ ಎದುರಿಸುವ ಮಾನಸಿಕ, ವ್ಯಾವಹಾರಿಕ ಆತಂಕಗಳು ಹಲ ವಾರು. ಅವೆಲ್ಲವುಗಳನ್ನು ಕಥೆಯಲ್ಲಿ ಸಂಯೋಜಿಸಿದ ವಿಧಾನ ಕಾದಂಬರಿ ಯನ್ನು ಒಂದು ರಮ್ಯಾಕೃತಿಯನ್ನಾಗಿಸುತ್ತದೆ. ಕಾದಂಬರಿಯ ಸೋಲು ಇರುವುದೇ ಇಲ್ಲಿ.

ಕಲಾರಾಧನೆಗಾಗಿ ತವಕಪಡುವ ನಾಯಕ, ಹೆಣ್ಣು, ಮದ್ಯಗಳ ದಾಸನಾಗುವುದು; ವಿಷಯಲಂಪಟನಾಗಿ ತನ್ನ ಆದರ್ಶಗಳಿಂದ ವಿಮುಖ ನಾಗುವುದು; ಅವನನ್ನು ಮತ್ತೆ ಮತ್ತೆ ಕಲಾರಾಧನೆಯ ಕಡೆಗೆ ಎಳೆದು ತರುವ ಪ್ರಯತ್ನಗಳು– ಕಾದಂಬರಿಯ ಹಿರಿಯ ಆಶಯವನ್ನು ತೆಳುವಾಗಿ ಸುತ್ತವೆ. ಬರವಣಿಗೆಯಲ್ಲಿ ಶಿಸ್ತು, ಸಂಯಮದ ಅಭಾವವಿರುವದರಿಂದ ಕಾದಂಬರಿಗೊಂದು ಬಿಗಿಯಾದ ಬಂಧವಿಲ್ಲ. ಯಾವ ಒಂದು ಸನ್ನಿವೇಶವೂ ಅನಿವಾರ್ಯವಾಗಿ, ಕಾಧಂಬರಿಯೊಳಗಿನ ಜೀವನ ಸ್ಥಿತಿಯಿಂದ ಮೂಡಿ ಬಂದದ್ದು ಎಂದು ತೋರುವುದೇ ಇಲ್ಲ. ವೃತ್ತಾಂತಗಳ ಧಾಟಿಯಲ್ಲಿ ಕತೆ ಬೆಳೆದು ಕೃತಿಯ ಗಾತ್ರ ಹೆಚ್ಚುತ್ತದೆ. ಕಲಾವಿದನ ಏಳಿಗೆಗೆ– ಅವನತಿಗೆ ಅವನ ಸುತ್ತಣ ಸಮಾಜದ ಪ್ರೇರಣೆ ಕಾರಣ, ಪ್ರತಿಕ್ರಿಯೆ– ಎಂತಹ

ದೆಂಬುದು ಕಾದಂಬರಿಯಲ್ಲಿ ಮೂಡದಿರುವದರಿಂದ ಕೃಷ್ಣರಾಯರ 'ನಟ ಸಾರ್ವಭೌಮ' ಅವರ ಮನೋವಿಭ್ರಮೆಯ ಮರ್ಜಿಯನ್ನನುಸರಿಸುವ ಗೊಂಬೆಯಾಗಿ ಕಾಣುತ್ತಾನೆ. ಓದುವ ಕ್ಷಣಗಳಲ್ಲಿ ಕಾದಂಬರಿಕಾರರ ವರ್ಣನಾ ವೈಖರಿಯ ತಾತ್ಕಾಲಿಕ ಪರಿಣಾಮದಿಂದ ಮಾತ್ರ ಓದುಗಾರಿಕೆ ಎಲ್ಲಿಯೂ ರಸಭಂಗವಾಗದೆ ಮುಂದುವರಿಯುತ್ತದೆ.

ಕಲಾವಿದನ ಜೀವನದ ಬಗ್ಗೆ ಕೃಷ್ಣರಾಯರಿಗಿರುವ ಗೌರವ, ಸಹಾನು ಭೂತಿ, ಅನುಕಂಪ ಎಷ್ಟೇ ಇದ್ದರೂ ಒಂದು ಕಲಾಕೃತಿಯಾಗಿ ಅವು ಮೂಡದೇ ಹೋಗುವುದರಿಂದ ಲೇಖಕನ ಜತೆಗೆ ಆತನ ಉದ್ದೇಶವೂ ಕೂಡ ಹೇಗೆ ನಿರರ್ಥಕಗೊಳ್ಳುವುದೆನ್ನುವುದಕ್ಕೆ ಅವರ ಈ ಬೃಹತ್ ಗಾತ್ರದ ಕೃತಿ ನಿದರ್ಶನವಾಗುತ್ತದೆ.

   

ಪ್ರಗತಿಶೀಲ ಚಳುವಳಿಯ ಸೆಳವಿನಲ್ಲಿ ಅ. ನ. ಕೃ. ಅವರು ಬರೆದ ಸಾಲ್ಕಾರು ಕಾದಂದರಿಗಳು ತುಂಬ ಜನಪ್ರಿಯತೆಯನ್ನು ಪಡೆದವು. ಈ ಜನಪ್ರಿಯತೆ ಅವುಗಳಲ್ಲಿಯ ಸಾಹಿತ್ಯಮೌಲ್ಯದಿಂದ ಬಂದದ್ದಲ್ಲ: ಅವು ತೋರಿಸಿದ ದಿಟ್ಟತನ ಮತ್ತು ಹೊಮ್ಮಿಸಿದ ತಾತ್ಕಾಲಿಕ ಪ್ರಚೋದನೆಗಾಗಿ.

ಶೋಷಣೆಯ ವಿರುದ್ಧ ಲೇಖಕ ಲೇಖನಿ ಪ್ರಯೋಗಿಸಬೇಕೆಂಬ ಪ್ರಗತಿ ಶೀಲರ ಪ್ರಣಾಳಿಕೆಗೆ ಪ್ರತಿಕ್ರಿಯೆಯಾಗಿ ಅ.ನ.ಕೃ. ಸಮಾಜದ ಪಾರಂಪರಿಕ ಪಿಡುಗಾದ ವೇಶ್ಯಾಸಮಸ್ಯೆ ಮತ್ತು ಆರ್ಥಿಕವಾಗಿ ಪೆಟ್ಟುತಿನ್ನುವ ಕಾರ್ಮಿಕರ ಉದ್ಯೋಗ ಸಮಸ್ಯೆಗಳನ್ನು ವಸ್ತುವಾಗಿ ಎತ್ತಿಕೊಂಡು ಬರೆದ ಕಾದಂಬರಿಗಳು ಅನೇಕ. 'ನಗ್ನಸತ್ಯ', 'ಶನಿಸಂತಾನ', 'ಸಂಜೆಗತ್ತಲು' ಈ ಮೂರು ಕೃತಿಗಳಲ್ಲಿ ವೇಶ್ಯಾವೃತ್ತಿಗೆ ಕಾರಣವಾಗುವ ಮೂರು ಮುಖ ಗಳನ್ನು ಬಣ್ಣಿಸುತ್ತಾರೆ. ಹಣವುಳ್ಳ ಗಂಡು, ಆರ್ಥಿಕವಾಗಿ ದುರ್ಬಲಳಾದ ಹೆಣ್ಣನ್ನು ಉಪಭೋಗಿಸಲು ಹೂಡುವ ಸಂಚುಗಳ ಪರಿಣಾಮವಾಗಿ ಆಕೆ ವೇಶ್ಯೆಯಾಗುವುದು; ಹೆಣ್ಣಿನಲ್ಲಿರುವ ಸ್ವಚ್ಛಂದ ಕಾಮದ ತೀವ್ರತೆಯಿಂದಾಗಿ ಆಕೆ ಸೂಳೆಗಾರಿಕೆಗೆ ಬಲಿಯಾಗುವುದು; ಹೆಣ್ಣಿನ ಸ್ವಭಾವವನ್ನರಿಯದೆ

ಗಂಡು ತೋರುವ ಸಹಾನುಭೂತಿ ಕೂಡ ಆಕೆಯನ್ನು ಪಾಪ ಕೂಪದಿಂದ ಮೇಲೆತ್ತಲಾರದೆಂಬ ಅಸಹಾಯತೆ–ಇವನ್ನು ಕಮಲ, ಸರಸ್ವತಿ ಹಾಗೂ ಆಕೆಯ ಮಕ್ಕಳ ಕತೆಗಳಲ್ಲಿ ಚಿತ್ರಿಸುತ್ತಾರೆ. ಒಂದೇ ಸವನೆ ಓದಿಸಿಕೊಂಡು ಹೋಗುವಂಥ ರಭಸದ, ರಸವತ್ತಾದ ಶೈಲಿ ಈ ಕಾದಂಬರಿಗಳ ವೈಶಿಷ್ಟ್ಯ. ಪ್ರೇಮ–ಕಾಮಗಳ ಯಥಾರ್ಥ ಚಿತ್ರಣವೊಂದೇ ಆ ಸಮಸ್ಯೆಯ ಗಹನತೆ, ಆಳ–ಅಗಲಗಳನ್ನು ಸ್ಪಷ್ಟಪಡಿಸಲಾರದು. ಕೃಷ್ಣರಾಯರು ಯಥಾರ್ಥತೆಯ ಅತಿರೇಕದಲ್ಲಿ ಸಮಸ್ಯೆಯ ಹಿಂದಿನ ಸೂಕ್ಷ್ಮಗಳನ್ನು ಮರೆತಿದ್ದಾರೆ. ಇಲ್ಲಿಯ ಪಾತ್ರಗಳು, ಸೃಷ್ಟಿಗೊಂಡ ಸನ್ನಿವೇಶಗಳು ಸೂತ್ರದ ಬೊಂಬೆಯಂತೆ ಯಾಂತ್ರಿಕವಾಗಿವೆ. ಎಲ್ಲಿಯೂ ಸೂಳೆಯರ, ವಿಟಪುರುಷರ, ತಲೆಹಿಡುಕರ ಮನಸ್ಸಿನ ಒಳಪದರುಗಳ ವಿಶ್ಲೇಷಣೆಯ ಪ್ರಯತ್ನವಿಲ್ಲ. ಈ ಚಿತ್ರಣಗಳಲ್ಲಿ "ಆಗುವಿಕೆ" ಗಿಂತ "ಮಾಡಿಸುವಿಕೆ"ಯೇ ಮುಖ್ಯವಾಗುವದರಿಂದ ಇತ್ತ ಸಮಸ್ಯೆಯ ಬಗ್ಗೆ ಕಾದಂಬರಿಯು ಕಲಾತ್ಮಕ ದಾಖಲೆಯೂ ಆಗದೆ; ಅತ್ತ ಸಮಸ್ಯೆಯನ್ನು ನಿವಾರಿಸುವ ಅಸ್ತ್ರವೂ ಆಗದೆ ಓದುಗರಲ್ಲಿಯ ಲಂಪಟತೆಯನ್ನು ಮಾತ್ರ ತಣಿಸುವ ಸಾಧನವಾಗುತ್ತದೆ. ಇಂಥ ತೀವ್ರ ಟೀಕೆ ಬಂದ ಹೊಸತರಲ್ಲಿ ಅ.ನ.ಕೃ. ತಮ್ಮ ಹರಿತ ಲೇಖನಿಯಿಂದ ನಾಡಿಗೇ ನೀಡಿದ ಉತ್ತರ 'ಸಾಹಿತ್ಯ–ಮತ್ತು ಕಾಮಪ್ರಚೋದನೆ' ಗ್ರಂಥದಲ್ಲಿ ವಿವರವಾಗಿ ಬಂದಿದೆ. ಲೈಂಗಿಕತೆ, ಗಂಡು–ಹೆಣ್ಣಿನ ಸಂಬಂಧ, ವೇಶ್ಯೆಗಾರಿಕೆ-ಇವುಗಳ ನಡುವಿನ ಸೂಕ್ಷ್ಮ ಭೇದವನ್ನರಿಯದೆ, ಕೃಷ್ಣರಾಯರು ಗೊಂದಲಕ್ಕೊಳಗಾಗಿರುವುದು ಅಲ್ಲಿ ಇನ್ನಷ್ಟು ನಿಚ್ಚಳವಿದೆ.

ಸಾಹಿತ್ಯಕ್ಕೆ ಸಾಮಾಜಿಕ ಜವಾಬ್ದಾರಿ ಇರಬೇಕು, ಸಾಹಿತಿ ಸಮಾಜದ ಏರು–ಪೇರುಗಳಿಗೆ ಸ್ಪಂದಿಸಬೇಕೆಂದು ಪ್ರತಿಪಾದಿಸುವ ಮೂರು ಕಾದಂಬರಿಗಳನ್ನು– 'ಸಾಹಿತ್ಯರತ್ನ', 'ಕನ್ನಡಮ್ಮನ ಗುಡಿಯಲ್ಲಿ', 'ಗಾಜನಮನೆ'- ಕೃಷ್ಣರಾಯರು ಬರೆದರು. ಇಲ್ಲಿಯೂ ಕೂಡ ಅವರ ಬರವಣಿಗೆಯ ಸಾಮಾನ್ಯ ದೌರ್ಬಲ್ಯಗಳು ಅವರ ಆಶಯಗಳನ್ನು ಕೇವಲ ಹೇಳಿಕೆಗಳ ಮಟ್ಟದಲ್ಲೇ ಉಳಿಸಿವೆ ಎಂಬುದು ಮನದಟ್ಟಾಗುವ ಅಂಶ. ಈ ಕಾದಂಬರಿಗಳಲ್ಲಿ ವಿಜೃಂಭಿಸುವ ಆದರ್ಶಪರ ಸಾಹಿತಿ ಮೂರ್ತಿಯ ವ್ಯಕ್ತಿತ್ವ ಚಿತ್ರಣದ

ಸ್ವರೂಪವು 'ನಟಸಾರ್ವಭೌಮ' ರಾಜನಿಗಿಂತ ಯಾವ ವಿಧದಲ್ಲಿಯೂ ಭಿನ್ನವಿಲ್ಲ.

ಹಾಗಾದರೆ ಅ.ನ.ಕೃ. ತಮ್ಮ ಈ ಮಹತ್ತ್ವಾಕಾಂಕ್ಷಿ ಕಾದಂಬರಿಗಳ ರಚನೆಯಿಂದ ಸಾಧಿಸಿದ ಸಾಹಿತ್ಯಿಕ, ಸಾಮಾಜಿಕ ಅಥವಾ ಮತ್ತಾವುದೇ ಸಿದ್ಧಿಯಾವುದು? ಎಂಬ ಪ್ರಶ್ನೆ ಬಾಧಿಸುತ್ತಲೇ ಇರುತ್ತದೆ. ತಾತ್ಕಾಲಿಕವಾಗಿ ಆಯಾಕಾಲದ ಇತರ ಕಾದಂಬರಿಕಾರರ ಸಾಧನೆಯೊಂದಿಗೆ ಹೋಲಿಸಿದಾಗ ಕೃಷ್ಣರಾಯರ ಮೇಲೆ ಸೂಚಿಸಿದ ಕಾದಂಬರಿಗಳು ತಮ್ಮ ವಿಭಿನ್ನ ವಸ್ತು ಮತ್ತು ಕ್ರಾಂತಿಕಾರಿ ಜೀವನದೃಷ್ಟಿಯಿಂದಾಗಿ ಮಹತ್ತ್ವದ ಕೃತಿಗಳಾಗಿ ಗೋಚರವಾಗುತ್ತವೆಯೇ ಹೊರತು, ಇಡೀ ಪರಂಪರೆಯ ಅವಲೋಕನದಲ್ಲಿ ಅವು ಯಾವೊಂದೂ ಮಟ್ಟಕ್ಕೂ ತಲುಪದೆ ಹಿಂದೆ ಉಳಿಯುತ್ತವೆ. ಈ ವಿಫಲತೆಗೆ ಕಾರಣಗಳನ್ನು ಹೀಗೆ ಸಂಗ್ರಹಿಸಬಹುದು :

೧. ಕಾದಂಬರಿಕಾರನಿಗೆ ಸಮಕಾಲೀನ ಬದುಕಿನ ಗಹನತೆ, ಸಂಕೀರ್ಣತೆಗಳನ್ನು ಗ್ರಹಿಸಿ ಅದಕ್ಕೆ ಕೇಂದ್ರವಾಗಿರುವ ಸಮಸ್ಯೆಯ ಮೂಲವನ್ನು ಸೂತ್ರೀಕರಿಸುವ ಕೆಲಸ ಒಂದು ಆಹ್ವಾನವೇ ಸರಿ. ಅ.ನ.ಕೃ. ಅವರಿಗೆ ಸಮಕಾಲೀನರಾಗಿ ಕೆಲವು ಕಾದಂಬರಿ ಬರೆದು, ಈ ಪ್ರಕಾರವನ್ನು ಅರ್ಥಪೂರ್ಣಗೊಳಿಸಿದ ಶಿವರಾಮ ಕಾರಂತ, ಕುವೆಂಪು, ಮಾಸ್ತಿ, ಕೆ. ವಿ. ಅಯ್ಯರ್, ನಿರಂಜನ, ತ.ರಾ.ಸು., ಶ್ರೀರಂಗ, ಇನಾಮದಾರ, ಪುಟ್ಟಸ್ವಾಮಯ್ಯ. ದೇವುಡು ಮೊದಲಾದ ಕಾದಂಬರಿಕಾರರು ಇಂತಹ ಆಹ್ವಾನವನ್ನು ಸ್ವೀಕರಿಸಿ, ಕೈಗೆತ್ತಿಕೊಂಡ ಕೆಲವಾದರೂ ಕೃತಿಗಳಲ್ಲಿ ತಮ್ಮ ಸೃಷ್ಟ್ಯಾತ್ಮಕ ಪ್ರತಿಭೆಯ ಶಕ್ತಿ-ಯುಕ್ತಿಗಳನ್ನು ಕೇಂದ್ರೀಕರಿಸಿದರು. ಅ.ನ.ಕೃ. ಇದಕ್ಕೆ ವ್ಯವಧಾನವನ್ನು ತೋರದೆ ಉಳಿದರು. ಬರವಣಿಗೆ ಅವರಿಗೊಂದು ಸರಳ ಆಕರ್ಷಕ ಸಾಧನವಾದದ್ದರಿಂದ ಗಹನತೆಗಾಗಿ ಅವರು ಶ್ರಮಿಸದೇ ಉಳಿದರು.

೨. ಕಾದಂಬರಿಗೆ ಸಹಜತೆ, ಯಥಾರ್ಥತೆ ಅವಶ್ಯವೆಂದು ನಂಬಿದ ಅ.ನ.ಕೃ. ಜೀವನದಲ್ಲಿ ತಾವು ಕಂಡ, ಕೇಳಿದ, ಸ್ವತಃ ಅನುಭವಿಸಿದುದನ್ನೆಲ್ಲ ಹಸಿಹಸಿಯಾಗಿಯೇ ಬರೆದುಕೊಂಡರು. ವೇಶ್ಯಾ ಸಮಸ್ಯೆಯ ಹಿಂದಿರುವ

ಆರ್ತತೆಯನ್ನು ಅ.ನ.ಕೃ. ಅವರಿಂದ ಪ್ರಭಾವಿತರಾಗಿ ಬರೆದ ತ.ರಾ.ಸು. 'ಮಸಣದ ಹೂ' ವಿನಲ್ಲಿ ತೋರಿಸಿದಷ್ಟು ಕಲಾತ್ಮಕ ಸಂಯಮವನ್ನು ಇವರು ಎಲ್ಲಿಯೂ ತೋರಿಸಲಿಲ್ಲ. ಜೀವನ ಸಾಹಿತ್ಯದಲ್ಲಿ ಮೂಡುವಾಗ ಲೇಖಕನ ತಾತ್ತ್ವಿಕ, ನೈತಿಕ ನಿಲುವುಗಳನ್ನು ಒಳಗೊಂಡೇ ಮೂಡಬೇಕಾಗುತ್ತದೆ. ಅ.ನ.ಕೃ. ಈ ಅಂಶವನ್ನು ಗಮನಿಸದೆ ಹೋದರು.

೩. ಅ.ನ.ಕೃ. ಅವರಿಗೆ ಬರವಣಿಗೆಯು ಒಂದು ವೃತ್ತಿಯಾಗಿ ಬಿಟ್ಟಿದ್ದರಿಂದ ಕಾದಂಬರಿ ಬರವಣಿಗೆಗೆ ಅಗತ್ಯವಾದ ಪೂರ್ವಸಿದ್ಧತೆ, ಆಲೋಚನೆಯ ಕಲಾತ್ಮಕ ಸಂಯೋಜನೆ, ಇನ್ನಿತರ ಶಿಸ್ತುಗಳ ಗಂಭೀರ ಅಳವಡಿಕೆಗಳ ಕಡೆಗೆ ತಾಳ್ಮೆಯಿಂದ ಗಮನ ಹರಿಸುವುದು ಅಸಾಧ್ಯವಾಯಿತು. ಸಿದ್ಧ ಶೈಲಿ, ಸಿದ್ಧ ಪಾತ್ರಚಿತ್ರಣರೀತಿ, ಸಿದ್ಧ ಸನ್ನಿವೇಶಯೋಜನೆ ಈ ಮಾಮೂಲೀ ಸೂತ್ರಗಳಿಂದ ಹೊರಬಂದ ಕೃತಿಗಳು ಕಾರಖಾನೆಯ ಸರಕುಗಳಾದವೇ ಹೊರತು, ಅನುಭವನಿಷ್ಠ ಕಲಾಕೃತಿಗಳಾಗಲಿಲ್ಲ.

ಆದ್ದರಿಂದ, 'ಕಾದಂಬರಿ ಸಾರ್ವಭೌಮ' ಬಿರುದಿಗೆ ಪಾತ್ರರಾಗಿಯೂ ಅ.ನ.ಕೃ. ಸಾಹಿತ್ಯ ಇತಿಹಾಸದ ದೃಷ್ಟಿಯಿಂದ ಒಂದಾದರೂ ಸತ್ತ್ವಪೂರ್ಣ ಕಾದಂಬರಿ ರಚಿಸಿದರೆ ? ಎಂಬ ಪ್ರಶ್ನೆ ನಿರುತ್ತರವಾಗಿ ಉಳಿಯುತ್ತದೆ. ನಾಡು, ನುಡಿ, ಸಂಸ್ಕೃತಿ, ಪರಂಪರೆ, ಕಲಾತ್ಮಕ ಅಭಿರುಚಿ ಇವೆಲ್ಲ ಶ್ರೀಮಂತ ಆಸಕ್ತಿಗಳಿಂದ ಧೀಮಂತವಾಗಿದ್ದ ಅ.ನ.ಕೃ. ಅವರ ವ್ಯಕ್ತಿತ್ವವು ಸಾಹಿತ್ಯದ ಯಾವುದೇ ಒಂದು ಪ್ರಕಾರದಲ್ಲಿಯೂ ತನ್ನ ಅಂತಃಶಕ್ತಿಯನ್ನು ಅದರ ಉನ್ನತ ಮಟ್ಟದಲ್ಲೇ ಕಾಯ್ದುಕೊಳ್ಳುವಂತಹ ಸಾರ್ಥಕವಾದ ಒಂದಾದರೂ ಕೃತಿಯನ್ನು ರಚನೆ ಮಾಡದೇ ಉಳಿದದ್ದು ಕನ್ನಡ ಸೃಜನಶೀಲತೆಯ ಇತಿಹಾಸದಲ್ಲಿಯೇ ಒಂದು ಸೋಜಿಗಪೂರ್ಣ, ಆದರೆ ವಿಷಾದಪಡುವ ಸಂಗತಿಯಾಗಿದೆ.

---

# ಅ.ನ.ಕೃ. ಹಾಗೂ ಪ್ರಗತಿಶೀಲ ಸಾಹಿತ್ಯ

—ಜಿ ಎಸ್. ಕಾಪಸೆ

ಹೊಸಗನ್ನಡ ಸಾಹಿತ್ಯ ಕಳೆದ ಆರು ದಶಕಗಳಲ್ಲಿ ವೈವಿಧ್ಯಪೂರ್ಣವಾಗಿ ಬೆಳೆದಿದೆ. ಈ ಬೆಳವಣಿಗೆಯಲ್ಲಿ ಕೆಲವು ವಿಶಿಷ್ಟ ಘಟ್ಟಗಳೂ ಉಂಟು. ಈ ಕಾಲಾವಧಿಯಲ್ಲಿಯೇ ನಮ್ಮಲ್ಲಿ ರಾಜಕೀಯ, ಸಾಮಾಜಿಕ ಸ್ಥಿತ್ಯಂತರಗಳು ಉಂಟಾಗಿದ್ದು, ಅವು ಸಾಹಿತ್ಯದ ದಿಕ್ಕನ್ನೂ, ಧೋರಣೆಯನ್ನೂ ಬದಲಿಸಲು ಕಾರಣಗಳಾಗಿವೆ.

ಹೊಸಗನ್ನಡ ಸಾಹಿತ್ಯ ಒಂದು ವ್ಯವಸ್ಥಿತ ಕ್ರಮದಲ್ಲಿ ರೂಪುಗೊಂಡದ್ದು ಈ ಶತಮಾನದ ಮೂರನೆಯ ದಶಕದಲ್ಲಿ. ೧೯೨೧ರಲ್ಲಿ ಪ್ರಕಟವಾದ ಶ್ರೀಯವರ 'ಇಂಗ್ಲೀಷ ಗೀತಗಳು' ನವೋದಯಯುಗಕ್ಕೆ ನಾಂದಿಯನ್ನು ಹಾಡಿತು. ಅಲ್ಲಿಂದೀಚೆಗೆ 'ಪ್ರಗತಿಶೀಲ'. 'ನವ್ಯ'. 'ದಲಿತ-ಬಂಡಾಯ' ಎಂಬ ತಿರುವುಗಳು ನಮ್ಮ ಸಾಹಿತ್ಯದಲ್ಲಿ ಕಾಣಿಸಿಕೊಂಡವು. ಈ ಎಲ್ಲ ತಿರುವುಗಳು ಸ್ವಲ್ಪ ಹೆಚ್ಚು ಕಡಿಮೆ ಭಾರತೀಯ ಇತರ ಭಾಷೆಗಳಲ್ಲಿಯೂ ಕಾಣಿಸಿಕೊಂಡಿರುವುದನ್ನು ಗಮನಿಸಬಹುದು.

ಸಾಹಿತ್ಯದ ಹೊಸತನಕ್ಕೆ ಪ್ರೇರಣೆಗಳು ಹೊರಗಿನಿಂದ ದೊರೆಯುತ್ತಿರುವಂತೆ, ಒಳಗಿನ ಪರಿಸ್ಥಿತಿಯೂ ಅದಕ್ಕೆ ಕಾರಣವಾಗಿರುತ್ತದೆ. ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಹೊಸ-ಹೊಸ ಧೋರಣೆಗೆ ಹೊರಗಿನ ಪ್ರೇರಣೆ, ಒಳಗಿನ ಪರಿಸ್ಥಿತಿ ಎರಡೂ ಪ್ರೇರಕ ಮತ್ತು ಪೂರಕವಾಗಿರುವುದನ್ನು ಗುರುತಿಸಬಹುದು. ನವೋದಯಸಾಹಿತ್ಯಕ್ಕೆ ಇಂಗ್ಲೀಷ್ ರೋಮ್ಯಾಂಟಿಕ್ ಕಾವ್ಯಪ್ರೇರಣೆಯನ್ನು ನೀಡಿತು. ಗತಾನುಗತಿಕವಾದ ಸಾಹಿತ್ಯದಿಂದ ಬೇರ್ಪಡುವ, ಬದುಕಿನಲ್ಲಿ ಆಸಕ್ತಿ, ಸದಭಿರುಚಿ ಹುಟ್ಟಿಸಿಕೊಳ್ಳಬೇಕಾದ ಪರಿಸ್ಥಿತಿ ನಮ್ಮಲ್ಲಿತ್ತು. ಆಗಲೇ ಬಿ. ವೆಂಕಟಾಚಾರ್ಯ, ಗಳಗನಾಥ,

ಕೆರೂರ ವಾಸುದೇವಾಚಾರ್ಯ ಮುಂತಾದವರು ಸಾಹಿತ್ಯದಲ್ಲಿ ಹೊಸ ಸೈರನ್ನು ತರಲು ಪ್ರಯತ್ನ ನಡೆಸಿದ್ದರು. ಒಂದು ರೀತಿಯಿಂದ ಅವರು ಹೊಸ ಒಲವಿಗೆ ಭೂಮಿಕೆಯನ್ನು ಸಿದ್ಧಪಡಿಸಿದ್ದರೆಂದು ಹೇಳಬಹುದು. ಹೀಗಾಗಿ ನವೋದಯ ಪರಂಪರೆ ಬೇಗನೇ ಅಸ್ತಿತ್ವದಲ್ಲಿ ಬರಲು, ತೀವ್ರಗತಿಯಿಂದ ಮುಂದುವರಿಯಲು, ಸಾಹಿತ್ಯದ ಶ್ರೀಮಂತಿಕೆಯನ್ನು ಹೆಚ್ಚಿಸಲು ಸಾಧ್ಯವಾಯಿತು. ಎರಡು ದಶಕಗಳವರೆಗೆ ನಿರಾಂತಕವಾಗಿ ಮುಂದುವರೆದ ಈ ಸಾಹಿತ್ಯ ಇಡೀ ಕನ್ನಡ ಸಾಹಿತ್ಯವನ್ನೇ ಪುನರುಜ್ಜೀವನಗೊಳಿಸುವಲ್ಲಿ ಮಹತ್ವದ ಪಾತ್ರವಾಡಿತೆಂಬುದು ಸ್ಮರಣೀಯ ಮಾತಾಗಿದೆ.

ನವೋದಯ ಸಾಹಿತ್ಯ ಭರದಿಂದ ಬೆಳೆಯುತ್ತಿರುವ ಸಂದರ್ಭದಲ್ಲಿಯೇ ಪ್ರಗತಿಶೀಲ ಸಾಹಿತ್ಯ ನಮ್ಮಲ್ಲಿ ಪ್ರವೇಶಿಸಿತು. ನವೋದಯ ಸಾಹಿತ್ಯ ವರ್ಡ್ಸ್‌ವರ್ಥ, ಶೆಲ್ಲಿ, ಸೆಕ್ಸಪಿಯರ್, ಮಿಲ್ಟನ್, ವಾಲ್ಟರಸ್ಕಾಟ ಮೊದಲಾದವರ ಪ್ರಭಾವದಿಂದ ಭಾರತೀಯ ಸಂವೇದನೆಯನ್ನು ಅಭಿವ್ಯಕ್ತಗೊಳಿಸಲು ಹೊರಟಂತೆ, ಫ್ರಾನ್ಸಿನ ಮೋಪಾಸ, ಎಮಿಲಿ ಜೋಲಾ, ನಾರ್ವೆಯ ಇಬ್ಸನ್, ರಷ್ಯದ ಮ್ಯಾಕ್ಸಿಂಗಾರ್ಕಿ, ಮಾಯಕೋವಸ್ಕಿ ಮುಂತಾದವರಿಂದ ಪ್ರಚೋದಿತವಾದ ಪ್ರಗತಿಶೀಲ ಸಾಹಿತ್ಯ ನಮ್ಮ ಸಾಮಾಜಿಕ ವಿಷಮತೆಗಳನ್ನು ಸಾಹಿತ್ಯದಲ್ಲಿ ಪ್ರತಿಫಲಿಸಲು ಯತ್ನಿಸತೊಡಗಿತು. ಈ ಹೊಸ ಧೋರಣೆ ಸಂಪ್ರದಾಯವಾದಿಗಳಿಗೆ, ಮಡಿವಂತರಿಗೆ ಅಪ್ರಿಯವಾಗಿ ತೋರುವುದು ಸಹಜ. ಅಂತೆಯೇ ಪ್ರಗತಿಶೀಲ ಮನೋಭಾವದವರು ಒಂದು ಸಂಘ ಸ್ಥಾಪಿಸಿ, ತಮ್ಮ ಒಲವು-ನಿಲುವುಗಳನ್ನು ಪ್ರತಿಪಾದಿಸಬೇಕಾಯಿತು. ಯಾವುದೇ ಹೊಸ ಧೋರಣೆ ಬಂದಾಗ, ಆ ಧೋರಣೆಯನ್ನು ಪ್ರತಿಪಾದಿಸಬೇಕಾದ ಅಗತ್ಯವಿದ್ದೇ ಇರುತ್ತದೆ. ಮುಂದೆ ನವ್ಯತೆ ಬಂದಾಗ, ಬಂಡಾಯದ ಪ್ರತಿಕ್ರಿಯೆ ತೋರಿದಾಗ ಆ ಆ ಒಲವಿನ ಜನರು ತಮ್ಮ ತಮ್ಮ ವಿಚಾರಗಳನ್ನು ಬೇರೆ ಬೇರೆ ವೇದಿಕೆಗಳ ಮೂಲಕ ಪ್ರತಿಪಾದಿಸಿದುದನ್ನು ಇಲ್ಲಿ ಸ್ಮರಿಸಬಹುದು.

ಐತಿಹಾಸಿಕವಾಗಿ ನಮ್ಮಲ್ಲಿ ಪ್ರಗತಿಶೀಲ ಸಾಹಿತ್ಯ ಪ್ರಾರಂಭವಾದದ್ದು ೧೯೩೦ರ ಈಚೆಗೆ. ಮಾರ್ಕ್ಸವಾದವು ಈ ಸಾಹಿತ್ಯದ ಬುನಾದಿಯೂ ಹೌದು, ಕಟ್ಟಡವೂ ಹೌದು. ಕಾರ್ಲಮಾರ್ಕ್ಸ (೧೮೧೮-೮೩)

ಸಾಮ್ಯವಾದ (communism)ದ ಪ್ರತಿಪಾದಕ. ಅವನ ವಾದಕ್ಕೆ ಕಾರಣವಾದದ್ದು ೧೮ ಮತ್ತು ೧೯ ನೆಯ ಶತಮಾನಗಳ ಐರೋಪ್ಯ ರಾಷ್ಟ್ರಗಳಲ್ಲಿ ಕಣ್ಣಿಗೆ ಹೊಡೆಯುವಂತೆ ಕಂಡ ಸಾಮಾಜಿಕ, ರಾಜಕೀಯ ಸ್ಥಿತ್ಯಂತರಗಳು. ವೈಜ್ಞಾನಿಕ ಕ್ರಾಂತಿ ಮತ್ತು ರಾಜಕೀಯ ಬದಲಾವಣೆಗಳಿಂದ ಬಂಡವಾಳಶಾಹಿಗಳ ವಿರುದ್ಧ ಬಂಡೇಳಬೇಕಾದ ಪರಿಸ್ಥಿತಿ ಶ್ರಮಿಕವರ್ಗದವರಲ್ಲಿ ಉಂಟಾಯಿತು. ಪ್ರಖರವಾದ ಸಾಮಾಜಿಕ ಕಾಳಜಿಹೊಂದಿದ ಕಾರ್ಲ್‌ಮಾರ್ಕ್ಸ್ ಸಕಾಲಿಕವಾಗಿ ತನ್ನ ಸಾಮ್ಯವಾದವನ್ನು ಪ್ರತಿಪಾದಿಸಿದನು. 'ಸೃಷ್ಟಿಯು ಮೊದಲಿನಿಂದಲೂ ವಿಕಸನಶೀಲ ಅಥವಾ ಪ್ರಗತಿಶೀಲ ಗುಣವುಳ್ಳದ್ದೇ ಆಗಿದ್ದು, ಈ ಪ್ರಗತಿ ಸಂಘರ್ಷದ ಫಲವಾಗಿಯೇ ಸಾಧಿಸುತ್ತದೆ, ಎಂಬುದು ಆತನ ವಿಚಾರ ಆತನ ಸಾಮ್ಯವಾದಕ್ಕೆ ದ್ವಂದ್ವಾತ್ಮಕ ಮತ್ತು ಭೌತಿಕವಾದ (Dialectical Materialism) ಎಂದೂ ಹೆಸರಿದೆ. ಸೃಷ್ಟಿಯಲ್ಲಿ ಸ್ವೀಕಾರಾತ್ಮಕ ಮತ್ತು ನಕಾರಾತ್ಮಕ ಎಂಬೆರಡು ಶಕ್ತಿಗಳಿವೆ. ಪ್ರಗತಿಗೆ ಆತಂಕಕಾರಿಯಾದ ಪ್ರತಿಗಾಮಿಶಕ್ತಿಗಳನ್ನು ದಮನ ಮಾಡಿ ಸಾಮ್ಯವಾದವನ್ನು ಪ್ರಸ್ಥಾಪಿಸುವುದೇ ಮಾರ್ಕ್ಸ್‌ನ ಉದ್ದೇಶ. ಹೀಗೆ ಕ್ರಾಂತಿಕಾರಕವಾಗಿ ಸಾಮಾಜಿಕ ವ್ಯವಸ್ಥೆಯನ್ನು ಮಾರ್ಪಡಿಸಲು ಆಡಳಿತಾತ್ಮಕ ವ್ಯವಸ್ಥೆಯಲ್ಲಿಯೂ ಅಭೂತಪೂರ್ವ ಬದಲಾವಣೆಯಾಗಬೇಕಾದುದರ ಅಗತ್ಯವಿರುವುದನ್ನು ಆತನು ಅರಿತಿದ್ದನು. ಸಾಮ್ಯವಾದದ ಉದ್ದೇಶ ಸಾಧನೆಗಾಗಿ ಹೋರಾಟ ನಡೆಸಬೇಕಾದುದನ್ನೇ ಪ್ರಗತಿಶೀಲ ಚಳುವಳಿ (Progressive movement) ಎಂದು ಕರೆಯಲಾಯಿತು. ಪ್ರತ್ಯಕ್ಷ ಜೀವನದಲ್ಲಿ ನಡೆಯಬೇಕಾದ ಈ ಚಳುವಳಿಗೆ ಸಾಹಿತ್ಯ ಮಾಧ್ಯಮವಾದಾಗ ಅದು ಪ್ರಗತಿಶೀಲ ಸಾಹಿತ್ಯವೆನಿಸಿತು.

ಮಾರ್ಕ್ಸ್ ಹಾಗೂ ಲೇನಿನ್‌ರ ಧೋರಣೆ ಸಾಹಿತ್ಯದಲ್ಲಿ ಪ್ರವೇಶಿಸಲು ಹೆಚ್ಚು ಕಾಲ ಹಿಡಿಯಲಿಲ್ಲ. ಅದು ಸಮಯದ ಅವಶ್ಯಕತೆಯೂ ಆಗಿದ್ದರಿಂದ ಬಹುಬೇಗ ಸಾಹಿತ್ಯದಲ್ಲಿ ವಿಶೇಷ ಸ್ಥಾನಪಡೆಯಿತು. ಲೇನಿನ್‌ನು ಒಂದು ಸಂದರ್ಭದಲ್ಲಿ "The real art is always linked with great social ideas" ಎಂದು ಸಾರಿದನು. ಅವನ ಈ ಅಭಿಪ್ರಾಯಕ್ಕೆ ಪುಷ್ಕಿನ್, ನೆಕ್ರಾಸೊವ್, ಚೆರ್ನಿಶಿವಸ್ಕಿ; ಟಾಲ್‌ಸ್ಟಾಯ್,

ರಾಕಿ, ಗಯುಟೆ, ಶೋಲೋಖಾ ಮೊದಲಾದವರ ಸಾಹಿತ್ಯಕೃತಿ ಆಧಾರವಾಗಿ ನಿಂತಿತು. ಕನಸುಗಾರಿಕೆಯ ರೋಮ್ಯಾಂಟಿಕ್ ಯುಗಕ್ಕೆ ಭಿನ್ನವಾದ ವಾಸ್ತವತೆಯ ಖಚಿತವಾದ ಅನುಭವಕ್ಕೆ ರಸಿಯದ ಸಾಹಿತಿಗಳು ಒತ್ತು ಕೊಟ್ಟರು. ಅವರ ಪ್ರೇರಣೆ, ಪ್ರಭಾವಗಳು ವಿಶ್ವದ ತುಂಬ ಹರಡಿಕೊಂಡವು.

ಪ್ರಗತಿಶೀಲ ಲೇಖಕರ ಸಂಘ ಪ್ರಥಮವಾಗಿ ಸ್ಥಾಪಿತವಾದದ್ದು ಪ್ಯಾರಿಸಿನಲ್ಲಿ. ಆದರ ಅಧ್ಯಕ್ಷರು ಈ ಎಂ. ಫಾರ್ಸ್ಟರ್. ೧೯೩೫ರಲ್ಲಿ ಸ್ಥಾಪಿತವಾದ ಈ ಸಂಘಕ್ಕೆ Progressive Writers Association ಎಂದೇ ಹೆಸರಿತ್ತು. ನಂತರ ಭಾರತೀಯ ಲೇಖಕರಾದ ಮುಲ್ಕರಾಜ ಆನಂದ, ಸಜ್ಜಾದ ಜಾಹೀರ ಮೊದಲಾದವರು ಲಂಡನ್ನಿನಲ್ಲಿ 'ಭಾರತೀಯ ಪ್ರಗತಿಶೀಲ ಲೇಖಕರ ಸಂಘ' ವನ್ನು ಸ್ಥಾಪಿಸಿದರು. ರವೀಂದ್ರನಾಥ ಠಾಕೂರ ಮತ್ತು ಪ್ರೇಮಚಂದರಂಥ ಭಾರತೀಯ ಪ್ರತಿಭಾನ್ವಿತ ಲೇಖಕರು ತತ್‌ಕ್ಷಣಕ್ಕೆ ಈ ಕಡೆಗೆ ಆಕರ್ಷಿತರಾದರು. ರವೀಂದ್ರನಾಥರಿಗಿಂತ ಪ್ರೇಮಚಂದರು ಪ್ರಗತಿಶೀಲ ಸಾಹಿತ್ಯದ ಬಗ್ಗೆ ತೋರಿದ ಕಾಳಜಿ, ಮಾಡಿದ ಕಾರ್ಯ ಹೆಚ್ಚು ಗಮನಾರ್ಹವಾಗಿದೆ, ಮಾದರಿಯದೂ ಆಗಿದೆ.

ಭಾರತೀಯರನ್ನು ಪ್ರಗತಿಶೀಲ ಸಾಹಿತ್ಯ ಆಕರ್ಷಿಸಿದ್ದರೂ ಇಲ್ಲಿ ಒಂದು ಸಂಘ ಸ್ಥಾಪಿತವಾಗಲು ಎಳೆಂಟು ವರ್ಷಗಳೇ ಕಳೆಯಬೇಕಾಯಿತು. ಭಾರತ ಸ್ವಾತಂತ್ರ್ಯಕ್ಕಾಗಿ ಹೋರಾಡುವ ಮಹತ್ವದ ಸಂಧಿಕಾಲದಲ್ಲಿ ಜಾಗತಿಕ ಮಹಾಯುದ್ಧದ ಘಟನೆಯೊಂದು ನಡೆದು ಹೋಯಿತು. ಅದು ಮುಗಿಯುತ್ತಿದ್ದಂತೆಯೇ ಚಲೇಜಾವ ಚಳುವಳಿ ಬಿರುಸಿನಿಂದ ಭಾರತದ ತುಂಬ ಹರಡಿತು. ಹೀಗಾಗಿ ಪ್ರಗತಿಪರರಾಗಿದ್ದ ನಮ್ಮ ಹಲವು ಲೇಖಕರಿಗೆ ಸಂಘ ಕಟ್ಟಿಕೊಳ್ಳುವಲ್ಲಿ ಒಂದಿಷ್ಟು ವಿಲಂಬವಾಯಿತು. ೧೯೪೩ನೆಯ ಇಸ್ವಿಗಿಂತ ಮೊದಲು ಪ್ರಗತಿಶೀಲರ ಮಹಾಸಭೆಗಳು ನಡೆದವಾದರೂ ಅವರ ಸಂಘಕ್ಕೆ ಸರಿಯಾದ ಅಸ್ತಿತ್ವ ಬಂದದ್ದು ಈಗಲೇ ಎಂದು ಹೇಳಬಹುದು. ೧೯೪೩ರ ಮೇ ತಿಂಗಳು ೨೨,೨೩ ಮತ್ತು ೨೪ರಂದು ಮುಂಬಯಿಯಲ್ಲಿ ಅಖಿಲ ಭಾರತ ಪ್ರಗತಿಶೀಲರ ನಾಲ್ಕನೆಯ ಸಮ್ಮೇಲನ ಜರುಗಿತು.

ಭಾರತೀಯ ಪ್ರಗತಿಶೀಲ ಮನೋಧರ್ಮದ ಸಾಹಿತಿಗಳು ಅಲ್ಲಿ ಸೇರಿ, ಪ್ರಗತಿಶೀಲ ಬರೆಹಗಾರರ ಕಾರ್ಯಕಾರಿ ಸಮಿತಿಯನ್ನು ಪುನರ್ರಚಿಸಿಕೊಂಡರು. ಶ್ರೀ ವಿ. ಎಂ. ಇನಾಮದಾರ, ಕೃಷ್ಣಕುಮಾರ ಕಲ್ಲೂರ ಅವರು ಕರ್ನಾಟಕ ಶಾಖೆಯ ಕಾರ್ಯದರ್ಶಿಗಳಾಗಿ ಚುನಾಯಿತರಾದರು. ಅಖಿಲ ಭಾರತ ಪ್ರಗತಿಶೀಲ ಮಂಡಳಿಗೆ ಪ್ರೊ. ಆರ್. ವಿ. ಜಹಾಗೀರದಾರರು ಸದಸ್ಯರಾಗಿ ಆಯ್ಕೆಯಾದರು.

೧೯೪೩ರ ಮುಂಬಯಿ ಮಹಾಸಮ್ಮೇಲನದ ಮಹತ್ವದ ನಿರ್ಣಯಗಳು ಪ್ರಗತಿಶೀಲರನ್ನು ತೀವ್ರ ಚಟುವಟಿಕೆಗೆ ತೊಡಗಿಸಿದವು. ಪ್ರಾಂತೀಯ ಮಟ್ಟದಲ್ಲಿಯೂ ಒಂದು ಸಂಘ ಸ್ಥಾಪಿಸುವುದರ ಅಗತ್ಯವೂ ಆಗ ಕಂಡು ಬಂದಿತು. ತತ್ಪರಿಣಾಮವಾಗಿ ಕರ್ನಾಟಕದಲ್ಲಿ ಪ್ರಗತಿಶೀಲ ಬರಹಗಾರರ ಸಂಘವು ಅಸ್ತಿತ್ವಕ್ಕೆ ಬಂದಿತು. ೧೯೪೩ರ ಡಿಶಂಬರ ತಿಂಗಳಿನಲ್ಲಿ ಬೆಂಗಳೂರಿನಲ್ಲಿ ಶ್ರೀ ವಿ. ಬಿ. ಬಳ್ಳಾರಿ ('ವಾಣಿ' ಪತ್ರಿಕೆಯ ಸಂಪಾದಕರು) ಅವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಸಂಘದ ಕಾರ್ಯಕಾರಿ ಮಂಡಳಿ ರಚಿತವಾಗಿ ಶ್ರೀ ಅ.ನ.ಕೃಷ್ಣರಾಯರು ಅಧ್ಯಕ್ಷರಾಗಿ, ಶ್ರೀ ನಾಡಿಗೇರ ಕೃಷ್ಣರಾಯರು ಮತ್ತು ಅನಂತಪದ್ಮನಾಭ ಸೊಗಲ ಅವರು ಕಾರ್ಯದರ್ಶಿಗಳಾಗಿಯೂ ಆಯ್ಕೆಯಾದರು. ಶ್ರೀ ಅ.ನ.ಕೃ. ಅವರು ಪ್ರಗತಿಶೀಲ ಬರೆಹಗಾರರ ಸಂಘದ ಅಧ್ಯಕ್ಷರಾದ ಮೇಲೆ ಅದಕ್ಕೊಂದು ತೀವ್ರತರವಾದ ಚಾಲನೆ ಸಿಕ್ಕಿತು. ಕನ್ನಡ ನಾಡಿನ ಬೇರೆ ಬೇರೆ ನಗರಗಳಲ್ಲಿ ಪ್ರಗತಿಶೀಲದ ಪ್ರಚಾರ ಸಭೆಗಳು ನಡೆದವು. ಕನ್ನಡದ ಗಣ್ಯ ಲೇಖಕರಾದ ಪ್ರೊ. ವಿ. ಕೃ. ಗೋಕಾಕರು ಶಿವಮೊಗ್ಗೆಯ ಒಂದು ಸಭೆಯಲ್ಲಿ ಮಾತನಾಡುತ್ತ, "ಇದು ಪ್ರಗತಿಶೀಲ ಸಾಹಿತ್ಯವಾದರೆ ಇದೇ ನಮಗೆ ಬೇಕು. ಇದರಲ್ಲಿ ಲೇಖಕರು ತಮ್ಮದೇ ಆದ ವೈಯಕ್ತಿಕ ವೈಶಿಷ್ಟ್ಯ ತೋರಿದ್ದಾರೆ. ನಮ್ಮ ನಾಡಿನ ದಲಿತ ಜನತೆಯ ವೀಣೆ ಇದು" [1] ಎಂದು ನುಡಿದರು. ಅ.ನ.ಕೃ., ನಿರಂಜನ, ಕುಮಾರ ವೆಂಕಣ್ಣ, ತ.ರಾ.ಸು., ಬಸವರಾಜ ಕಟ್ಟೀಮನಿ ಮೊದಲಾದವರು ಈ ಸಾಹಿತ್ಯವನ್ನು ದಲಿತರ, ದುಃಖಿತರ, ಶ್ರಮಿಕರ

1. 'ಪ್ರಗತಿಶೀಲ ಸಾಹಿತ್ಯ' ಪು. 59

ರೈತರ, ಅಸಹಾಯಕರ, ಒಟ್ಟಂದದಲ್ಲಿ ಎಲ್ಲ ಬಗೆಯ ಶೋಷಣೆಗೆ ಒಳಗಾದವರ ವಾಣಿಯನ್ನಾಗಿ ಮಾಡಿದರು. ಗೋಕಾಕರು ನುಡಿದಂತೆ ಅದು ಬರಿ ಇಂಪಾದ ವೀಣೆಯಾಗಲಿಲ್ಲ, ಆವೇಶದ ಪಾಂಚಜನ್ಯವೂ ಆಯಿತು.

ಪ್ರಗತಿಶೀಲ ಸಾಹಿತ್ಯವನ್ನು ಕುರಿತು ಕ್ರಿಸ್ತ ಧರ್ಮಪ್ರಸಾರಕರ ಶ್ರದ್ಧೆಯನ್ನು ಮೀರಿಸುವಂತೆ ಅ.ನ.ಕೃ. ಅವರು ಬರೆದರು ಮತ್ತು ಮಾತನಾಡಿದರು. ಅವರ ಕೆಲವು ವಿಚಾರಗಳನ್ನು ಈ ಸಂದರ್ಭದಲ್ಲಿ ಗಮನಿಸುವುದು ಸೂಕ್ತವೆನಿಸುತ್ತದೆ. ಪ್ರಗತಿಶೀಲ ಸಂಘದ ಪರವಾಗಿ ಅವರು ಹಲವಾರು ಕೃತಿಗಳನ್ನು ಪ್ರಕಟಿಸಲು ಪ್ರಯತ್ನಿಸಿದ್ದಾರೆ. ಕುಮಾರ ವೆಂಕಣ್ಣ ಅವರ 'ಭಾರತಶಕ್ತಿ' ಸ್ವತಃ ಅ.ನ.ಕೃ. ಅವರು ಬರೆದ 'ನನ್ನನ್ನು ನಾನೇ ಕಂಡೆ' ಸಂಪಾದಿಸಿದ 'ಪ್ರಗತಿಶೀಲ ಸಾಹಿತ್ಯ' 'ಮ್ಯಾಕ್ಸಿಂಗಾರ್ಕಿ' ಈಮೊದಲಾದ ಕೃತಿಗಳು ಗಮನಾರ್ಹವಾಗಿವೆ. 'ಪ್ರಗತಿಶೀಲ ಸಾಹಿತ್ಯ' ಗ್ರಂಥಕ್ಕೆ ಮುನ್ನುಡಿ ಬರೆಯುತ್ತ "ಮೈಬಣ್ಣದ ಹೆಸರಿನಲ್ಲಿ ಮನುಷ್ಯ ಮನುಷ್ಯನನ್ನು ತುಳಿಯುತ್ತಿದ್ದಾನೆ. ಭಾಷೆಯ ಹೆಸರಿನಲ್ಲಿ ಮನುಷ್ಯ ಮನುಷ್ಯನನ್ನು ಪೀಡಿಸುತ್ತಿದ್ದಾನೆ. ಈ ಅನ್ಯಾಯ, ಈ ಅಸಮಾನತೆ, ದೌರ್ಜನ್ಯ ಬುಡಮೂಲವಾಗಿ ಹೋಗಬೇಕೆಂದು ಜಗತ್ತಿನಲ್ಲಿ ಯಾವ ವಿಚಾರವಾದಿ ಬಯಸುವುದಿಲ್ಲ....." [2] "ದೌರ್ಜನ್ಯ, ದಬ್ಬಾಳಿಕೆ, ದಲಿತರ ರಕ್ತ ಶೋಷಣೆಯನ್ನೆದುರಿಸದ ಸಾಹಿತಿ ಶಿಖಂಡಿ" [3] ಎಂಬಿತ್ಯಾದಿ ವಿಚಾರಗಳನ್ನು ಖಡಾಖಂಡಿತವಾಗಿ ಪ್ರತಿಪಾದಿಸಿದಂತೆ ಹರಿಜನರ, ಸ್ತ್ರೀಯರ ಸ್ಥಿತಿ-ಗತಿಗಳನ್ನೂ ವಸ್ತುನಿಷ್ಠವಾಗಿ ಆಲೋಚಿಸಿದ್ದಾರೆ. "ಭಾರತದಲ್ಲಿರಬೇಕಾದುದು ಒಂದೇ ಧರ್ಮ-ಭಾರತ ಧರ್ಮ. ಇದರ ಮುಂದೆ ಎಲ್ಲಾ ಧರ್ಮಗಳೂ ಜಾತಿಗಳೂ, ಮತಗಳೂ, ರಾಜಕೀಯ, ಸಾಮಾಜಿಕ, ಸಾಹಿತ್ಯ ಪಕ್ಷ ವಿಪಕ್ಷಗಳೂ ಹೇಳಹೆಸರಿಲ್ಲದಾಗಬೇಕು" [4] ಎಂದು ಅವರು ಘೋಷಿಸಿದ್ದೂ ಉಂಟು. ಅವರ ಈ ಬರೆವಣಿಗೆ ಅಂದಿನ ಯುವ ಲೇಖಕರಲ್ಲಿ ಹೊಸ ದೃಷ್ಟಿಕೋನವನ್ನು ತಂದುಕೊಡಲು ಸಹಾಯ ಮಾಡಿತು ಎಂಬುದರಲ್ಲಿ ಸಂದೇಹವಿಲ್ಲ.

---

2 ಪ್ರಗತಿಶೀಲ ಸಾಹಿತ್ಯ ಪು. II 3 ಪ್ರಗತಿಶೀಲ ಸಾಹಿತ್ಯ ಪು. III
4 ಪ್ರಗತಿಶೀಲ ಸಾಹಿತ್ಯ ಪು. XXIV

ಅ.ನ.ಕೃ. ಅವರು ಪ್ರಗತಿಶೀಲ ಲೇಖಕರ ಸಂಘದಿಂದ ಪ್ರಕಟಿಸಿದ 'ನನ್ನನ್ನು ನಾನೇ ಕಂಡೆ' ಕೃತಿಯಲ್ಲಿ ಪ್ರಗತಿಶೀಲ ಸಾಹಿತ್ಯದ ಬಗೆಗಿನ ತಮ್ಮ ನಿಲುವುಗಳನ್ನು ಸ್ಪಷ್ಟಪಡಿಸಿದ್ದಾರೆ. ಕನ್ನಡ ಸಾಹಿತ್ಯದಲ್ಲಿಯೇ ಇದೊಂದು ವಿಶಿಷ್ಟವಾದ ಕೃತಿ. ಈ ಕೃತಿಯಲ್ಲಿ ಸ್ವಯಂ ಸಂದರ್ಶನವಿರುವುದನ್ನು ಕಾಣುತ್ತೇವೆ. ಅ.ನ.ಕೃ. ಅವರು ತಮ್ಮನ್ನು ಕುರಿತು ತಾವೇ ಪ್ರಶ್ನಿಸಿಕೊಂಡು, ತಾವೇ ಉತ್ತರಿಸುವ ಕ್ರಮ ಇಲ್ಲಿದೆ. ಒಂದು ಅಧ್ಯಾಯದಲ್ಲಿ ಪ್ರಗತಿಶೀಲ ಸಾಹಿತ್ಯವನ್ನು ಕುರಿತು ಅವರು ಉತ್ತರಿಸುತ್ತಿದ್ದಾರೆ. ಆ ಉತ್ತರಗಳಲ್ಲಿಯೇ ಕೆಲವು ಮಹತ್ವದ ಅಂಶಗಳನ್ನು ಅವರು ಹೀಗೆ ಕ್ರೋಢೀಕರಿಸಿ ಕೊಡುತ್ತಾರೆ.

೧. ಪ್ರಗತಿಶೀಲ ಲೇಖಕರ ಗುರಿ ಹಿಂದುಸ್ಥಾನದ ಸ್ವಾತಂತ್ರ್ಯಸಮರದಲ್ಲಿ ನೆರವಾಗುವುದು. ಸ್ವಾತಂತ್ರ್ಯ ಭಾವನೆಯನ್ನು ಭಾರತೀಯರ ಮನದಲ್ಲಿ ಅಚ್ಚೊತ್ತಲು ತಮ್ಮ ಲೇಖನಿಯನ್ನು ಅದಕ್ಕಾಗಿ ಮೀಸಲು ಮಾಡುವುದು. ಸ್ವಾತಂತ್ರ್ಯ ದೊರೆತ ಮೇಲೆ ಅದರ ಸಂರಕ್ಷಣೆಗೆ ನೆರವಾಗುವುದು.

೨. ಸಂಪ್ರದಾಯದ ಕೈಗೆ ಸಿಕ್ಕಿ ನರಳುತ್ತಿರುವ ನಮ್ಮ ಸಾಹಿತ್ಯ, ಕಲೆಗಳನ್ನು ಅದರ ಬಂಧನದಿಂದ ಪಾರುಮಾಡುವುದು.

೩. ಬಂಡಾವಾಳಶಾಹಿ (Capitalism) ಸಾಮ್ರಾಜ್ಯಶಾಹಿ (Imperialism) ಮತ್ತು ಫಾಸಿಜಂ, ನಾಜಿಜಂಗಳನ್ನೂ ಪ್ರಗತಿಶೀಲ ಲೇಖಕರ ಸಂಘ ತೀವ್ರವಾಗಿ ವಿರೋಧಿಸುತ್ತದೆ.

೪. ಹಿಂದುಸ್ತಾನದಲ್ಲಿ ಸಮಾನಜೀವನಗಳಿಗೆ ಅವಕಾಶವಾಗಲು ಪ್ರಗತಿಶೀಲ ಲೇಖಕರ ಸಂಘ ಹೆಣಗುತ್ತದೆ.

೫. ಪ್ರಗತಿಶೀಲ ಲೇಖಕರ ಸಂಘ ಪ್ರತಿಯೊಂದನ್ನೂ ಶ್ರಮಜೀವಿಗಳ ದೃಷ್ಟಿಕೋನದಲ್ಲಿ ನೋಡುತ್ತದೆ. ಶ್ರಮಜೀವಿಗಳ ಹಿತಸಂರಕ್ಷಣೆಯೇ ನಮ್ಮ ಜೀವಿತಧ್ಯೇಯ.[5]

೧೯೪೪ ರಲ್ಲಿ ಹೇಳಿದ ಈ ಎಲ್ಲ ಮಾತುಗಳಲ್ಲಿ ನಾವು ಸಾಧಿಸಿದ್ದು ಹಿಂದುಸ್ತಾನದ ಸ್ವಾತಂತ್ರ್ಯ ಒಂದನ್ನೇ–ಎಂದು ತಟ್ಟನೆ ಅನಿಸಿದರೂ ಉಳಿದ

5 ನನ್ನನ್ನು ನಾನೇ ಕಂಡೆ– ಪು. 49–50

ವಿಚಾರಗಳಲ್ಲಿ ನಮ್ಮಲ್ಲಿ ಪ್ರಗತಿಯೇ ಆಗಿಲ್ಲವೆಂದು ಹೇಳಲಿಕ್ಕಾಗದು. ಇಂದಿನ ಅನೇಕ ಲೇಖಕರಲ್ಲಿ ಈ ಎಲ್ಲ ವಿಚಾರಗಳು ಜೀವಂತವಾಗಿದ್ದು, ಹೊಸ ಲೇಖಕರ ದೃಷ್ಟಿಕೋನ ಶ್ರಮಜೀವಿಗಳತ್ತ ಹರಿದಿದ್ದುದು ಸ್ಪಷ್ಟ ವಾಗಿಯೇ ಕಾಣುತ್ತಲಿದೆ.

ಒಂದು ನಿಟ್ಟಿನಿಂದ ಪ್ರಗತಿಶೀಲ ಧೋರಣೆಯನ್ನು ಪ್ರತಿಪಾದಿಸಲು ಹೊರಟ ಅ.ನ.ಕೃ. ಅವರಿಗೆ ಇನ್ನೊಂದು ನಿಟ್ಟಿನಿಂದ ಆ ಕಾಲದಲ್ಲಿ ಪ್ರತಿಗಾಮಿಗಳೆನಿಸಿದ ಅಥವಾ ಒಂದು ಬಗೆಯ ಮಡಿವಂತಿಕೆಯಲ್ಲಿಯೇ ಸಾಹಿತ್ಯದ ಸಾರ್ಥಕತೆಯಿದೆಯೆಂದು ಸಾಧಿಸಹೊರಟ ಮಹನೀಯರ ಸವಾಲು ಗಳನ್ನು ಎದುರಿಸಬೇಕಾದ ಪ್ರಸಂಗಗಳು ಎದುರಾಗಿದ್ದುದೂ ಉಂಟು. ಹಿರಿಯ ತಲೆಮಾರಿನ ಸಾಹಿತಿಗಳಾದ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ, ಬೆಟಗೇರಿ ಕೃಷ್ಣಶರ್ಮರಂಥವರು ಅ.ನ.ಕೃ. ಅವರ ವಿಚಾರಗಳಿಗೆ ವಿರುದ್ಧ ವಾದ ವಾದ ಹೂಡಿದ್ದು ಅಲಕ್ಷಿಸುವಂಥ ಸಂಗತಿಯೇನೂ ಆಗಿರಲಿಲ್ಲ. ೧೯೪೪ ರ ಸುಮಾರಿಗೆ ಪುರೋಗಾಮಿ ಸಾಹಿತಿಗಳಲ್ಲೊಬ್ಬರಾದ ಶ್ರೀ ಕುಳಕುಂದ ಶಿವರಾಯರು (ನಿರಂಜನರು) ಪ್ರಗತಿಶೀಲರ ವಿರುದ್ಧ ನಿಂತಿದ್ದು ಒಂದು ಮೋಜಿನ ಸಂಗತಿಯೇ ಆಗಿದೆ. "ಸಂಪ್ರದಾಯಪ್ರಿಯರಾದ ಸಾಹಿತಿಗಳೂ ಶಿವರಾಯರಂಥ ಪ್ರತಿಗಾಮಿಗಳೂ ಒಂದಲ್ಲ ಒಂದು ದಿನ ಒಟ್ಟುಗೂಡಿ ಬಹು ಮುಖವಾಗಿ ಬೆಳೆಯುತ್ತಿರುವ ಕನ್ನಡ ಸಾಹಿತ್ಯದ ಪ್ರಗತಿಗೆ ಕಂಟಕವಾಗು ತ್ತಾರೆಂದು[6] ಅ.ನ.ಕೃ. ಅರಿತುಕೊಂಡು ಸಕಾಲಿಕವಾಗಿ ಎಚ್ಚರವಹಿಸಿ. ಅವರೆಲ್ಲರಿಗೆ ಸಮರ್ಪಕವಾದ ಉತ್ತರ ನೀಡಿದರು. "ಇಂಗ್ಲೆಂಡ್, ಅಮೇರಿಕ ಮತ್ತು ರಷ್ಯದ ರೀತಿಯಲ್ಲಿ ಸಾಹಿತ್ಯ ರಚಿಸಬೇಕೆಂಬ ಮನೋಧರ್ಮ ಬೇಡ[7] ಎಂದು ಮುಂತಾಗಿ ಉಪದೇಶಿಸಿದ ಮಾಸ್ತಿಯವರ, "ನಮ್ಮ ತರುಣ ಸಾಹಿತಿಗಳು ಗಂಡು ಹೆಣ್ಣಿನ ಸಮಸ್ಯೆಯನ್ನೂ ಆರ್ಥಿಕ ಸಮಸ್ಯೆಯನ್ನೂ ಕುರಿತ ಕಥೆಗಳನ್ನೇ ಹೆಚ್ಚಾಗಿ ಬರೆಯುತ್ತಿದ್ದಾರೆ. ಈ ಸಮಸ್ಯೆಗಳು ಇಂದಿನ ವಲ್ಲ, ಆರ್ಷೇಯವಾದವು. ಅದಕ್ಕೆ ತುಂಬ ಪ್ರಾಧಾನ್ಯತೆ ಕೊಡುವುದು

---

6 'ಸಾಹಿತ್ಯ ಮತ್ತು ಕಾಮಪ್ರಚೋದನೆ' ಅ.ನ.ಕೃ. ಪು. ೬

7 "ಸಾಹಿತ್ಯ ಮತ್ತು ಕಾಮಪ್ರಚೋದನೆ" ,, ,, ೭

ಸರಿಯಲ್ಲ."[8] ಎಂದು ಪ್ರಗತಿಶೀಲರಿಗೆ ಬುದ್ಧಿವಾದ ಮಾಡಿದ ಬೆಟಗೇರಿಯವರ ಮಾತುಗಳನ್ನು ಲಘುವಾಗಿ ತೆಗೆದುಕೊಳ್ಳುವದೆಂತು? ಅಂತೆಯೇ ಅ.ನ.ಕೃ. ಅವರು "ಈಚೆಗೆ ಕನ್ನಡದಲ್ಲಿ ಪ್ರಕಟವಾಗಿರುವ ಅ.ನ.ಕೃ. ತ.ರಾ.ಸು. ಚದುರಂಗ, ಬಸವರಾಜ ಕಟ್ಟೀಮನಿ, ಕುಮಾರ ವೆಂಕಣ್ಣ, ಬಿಂದುಮಾಧವ ಕುಲಕರ್ಣಿ ಇವರ ಕಾದಂಬರಿಗಳು ಇಂಗ್ಲಂಡ್, ಅಮೇರಿಕ, ರಷ್ಯಾಗಳಲ್ಲಿ ಯಾವ ದೇಶದ ಮನೋಧರ್ಮವನ್ನು ಪ್ರತಿಬಿಂಬಿಸುತ್ತಿವೆಯೆಂದು ಶ್ರೀಮಾಸ್ತಿಯವರು ಹೇಳಬಲ್ಲರೇ"[9]? ಎಂದು ಮಾಸ್ತಿಯವರಿಗೆ ಸವಾಲು ಹಾಕಿದರೆ, "ಜನಜೀವನದಿಂದ, ನಿತ್ಯ ಸಮಸ್ಯೆಗಳಿಂದ ಎಷ್ಟು ಗಾವುದ ದಾಚೆ ನಿಂತು ಶ್ರೀಕೃಷ್ಣಶರ್ಮರು ಈ ಮಾತುಗಳನ್ನಾಡಿದ್ದಾರೆಂಬು ದನ್ನು" ಎತ್ತಿತೋರಿಸಿ, 'ಈ ಸಮಸ್ಯೆಗಳು ಇಂದಿನವಲ್ಲ.... ಅಪ್ಪೇಯವಾದವು, ಎಂದು ಮುಂತಾಗಿ ಹೇಳಿರುವ ಕೃಷ್ಣಶರ್ಮರು ಪಲಾಯನಸೂತ್ರವಾದದ (Escapism) ಆದ್ಯ ಆಚಾರ್ಯರು[10] ಎಂದು ಮುಂತಾಗಿ ಒಂದಿಷ್ಟು ಖಾರವಾಗಿಯೇ ಬರೆದರು.

ಅ.ನ.ಕೃ. ಅವರು ಪ್ರಗತಿಶೀಲ ಚಳುವಳಿಯ ಅಧ್ವರ್ಯುಗಳಾಗಿ ತುಂಬ ಪ್ರಚಾರ ಮಾಡಿದರು. ಪ್ರಗತಿಶೀಲ ಧೋರಣೆಗೆ ವಿರುದ್ಧವಾಗಿ ಹೊರಟ ಎಲ್ಲ ಅಪಸ್ವರಗಳಿಗೆ ಸಮರ್ಥವಾದ ಪ್ರತಿಕ್ರಿಯೆ ವ್ಯಕ್ತಪಡಿಸಿದರು. ಅವರ ವಾದಸರಣಿ ಅಂದಿನ ಯುವ ಪೀಳಿಗೆಯನ್ನು ಆಕರ್ಷಿಸಿತು. ಅನೇಕರು ಪ್ರಗತಿಶೀಲ ಸಾಹಿತ್ಯಕ್ಕೆ ಒಲಿದರು.

ಅ.ನ.ಕೃ. ಅವರು ಪ್ರಗತಿಶೀಲ ಧೋರಣೆಯನ್ನು ಪ್ರತಿಪಾದಿಸಿದ-ರೇನೋ ನಿಜ. ಆದರೆ ಅವರ ವಾದಸರಣಿ ಸಂಪೂರ್ಣವಾಗಿ, ಸೈದ್ಧಾಂತಿಕ ವಾಗಿ ವೈಜ್ಞಾನಿಕವಾಗಿಯೇ ಇತ್ತೆಂದು ಹೇಳಲಿಕ್ಕಾಗದು. ಸೂಕ್ಷ್ಮವಾಗಿ ಗಮನಿಸಿದರೆ ಅವರ ವಾದದಲ್ಲಿ ಬಿರುಕುಗಳಿರುವುದು ಕಂಡು ಬರುತ್ತದೆ. ಪ್ರಗತಿಶೀಲದ ಮೇಲಿನ ಅವರ ನಿಷ್ಠೆ ಮಾತ್ರ ಪ್ರಶ್ನಾತೀತವಾದುದು.

---

8 ಸಾಹಿತ್ಯ ಮತ್ತು ಕಾಮಪ್ರಚೋದನೆ ಅ.ನ.ಕೃ. ಪು. ೮-೯

9 ಸಾಹಿತ್ಯ ಮತ್ತು ಕಾಮಪ್ರಚೋದನೆ ,, ,, ೮

10 ಸಾಹಿತ್ಯ ಮತ್ತು ಕಾಮಪ್ರಚೋದನೆ ,, ,, ೯

ಕನ್ನಡದಲ್ಲಿ ಪ್ರಗತಿಶೀಲತೆ ಸಣ್ಣಕತೆಗಳ ಮೂಲಕ ಪ್ರವೇಶವನ್ನು ಪಡೆಯಿತು. ಅ.ನ.ಕೃ. ಪ್ರಗತಿಶೀಲವೆನ್ನಬಹುದಾದ ಕತೆಗಳನ್ನು ಬರೆದರು. ಆದರೆ "ಅವರ ಕತೆಗಳನ್ನು ಸಂಪೂರ್ಣವಾಗಿ 'ಪ್ರಗತಿಶೀಲ' ವೆಂದು ಕರೆಯಲು ಸಾಧ್ಯವಿಲ್ಲ[೧೧]" ಅವರ 'ಅಗ್ನಿಕನ್ಯೆ' ಕಥಾ ಸಂಕಲನದಲ್ಲಿ ಮಾತ್ರ ಕೆಲವು ಪ್ರಗತಿಶೀಲ ಕತೆಗಳಿವೆ. ಬಡತನವನ್ನು ಕುರಿತು, ಸಾಮಾಜಿಕ ವಿಷಮತೆಯನ್ನು ಕುರಿತು ಮತ್ತು ಅವುಗಳ ದುಷ್ಪರಿಣಾಮಗಳನ್ನು ಕುರಿತು ಪರಿಣಾಮಕಾರಿಯಾದ ಕತೆಗಳನ್ನು ಅವರು ಬರೆದಿದ್ದರೂ ಬರವಣಿಗೆಯ ರೀತಿ ನವೋದಯದ ಮಾದರಿಯನ್ನೇ ಹೋಲುತ್ತದೆ. ಈ ಮಾತು ಎಲ್ಲ ಪ್ರಗತಿಶೀಲ ಲೇಖಕರಿಗೂ ಅನ್ವಯಿಸುವುದು. ಯಾಕೆಂದರೆ ಅವರು ಬರವಣಿಗೆಯ ಧೋರಣೆ (Trend)ಯಲ್ಲಿ ಪ್ರಗತಿಶೀಲರಾಗಿದ್ದಷ್ಟು ಅದರ ತಂತ್ರ (Technique) ಮತ್ತು ಶಿಲ್ಪ (Structure) ದಲ್ಲಿ ಪ್ರಗತಿಶೀಲರಾಗಿರಲಿಲ್ಲ. ನವೋದಯ ಮತ್ತು ಪ್ರಗತಿಶೀಲ ಬರವಣಿಗೆಯಲ್ಲಿ ಕಾಣುವ ಒಂದು ಮಹತ್ವದ ವ್ಯತ್ಯಾಸವೆಂದರೆ ಸಂಭಾಷಣೆಯ ಸಂದರ್ಭದಲ್ಲಿ– ಪ್ರಗತಿಶೀಲ ಕತೆಗಳು ಹೆಚ್ಚು ಚುರುಕಾಗಿದ್ದುದು, ಅಷ್ಟಲ್ಲದೆ ರಮ್ಯ ವರ್ಣನೆಗಳು ಕಡಿಮೆಯಾಗಿ ವಾಸ್ತವ ಚಿತ್ರಣಗಳಿಗೆ ಮಹತ್ವ ಕೊಟ್ಟದ್ದು ಇನ್ನೊಂದು ಪ್ರಗತಿಶೀಲದಲ್ಲಿ ಎದ್ದು ಕಾಣುವ ವ್ಯತ್ಯಾಸವೆಂದು ಹೇಳಬಹುದು. ಸಣ್ಣಕತೆಗಳ ತಂತ್ರದಲ್ಲಿ ಹೊಸತನವನ್ನು ತಂದವರು ಆಮೇಲಿನ ನವ್ಯಕತೆಗಾರರೆಂದು ಹೇಳಬಹುದು. ಅದೇನೆ ಇರಲಿ, ಸಣ್ಣಕತೆಗಳ ವಸ್ತು ಮತ್ತು ಧೋರಣೆಯಲ್ಲಿ ಪ್ರಗತಿಶೀಲರಿಂದಾದ ಬದಲಾವಣೆ ತುಂಬ ಗಮನಾರ್ಹವಾದದ್ದೆಂಬುದರಲ್ಲಿ ಸಂದೇಹವಿಲ್ಲ.

ಅ.ನ.ಕೃ. ಅವರಿಗಿಂತ ತ.ರಾ.ಸು, ಚದುರಂಗ, ಬಸವರಾಜ ಕಟ್ಟೀಮನಿ ಮೊದಲಾದವರು ಹೆಚ್ಚು ಅರ್ಥಪೂರ್ಣವಾದ ಪ್ರಗತಿಶೀಲ ಕತೆಗಳನ್ನು ಬರೆದರು.

ಪ್ರಗತಿಶೀಲ ಧೋರಣೆಗೆ ಅವಕಾಶ ನೀಡಿದ ಇನ್ನೊಂದು ಸಾಹಿತ್ಯ ಪ್ರಕಾರ ಕಾದಂಬರಿ. ಒಂದು ಹಂತದಲ್ಲಿ ಅ.ನ.ಕೃ. ಅವರು ಗುರುತಿಸಿದಂತೆ

---

೧೧ ಯುಗಧರ್ಮ ಹಾಗೂ ಸಾಹಿತ್ಯದರ್ಶನ –ಕೆ.ಡಿ. ಕುರ್ತಕೋಟಿ. ಪು. ೨೨೩

"ಕೆ. ವಿ. ಪುಟ್ಟಪ್ಪನವರ ಅದ್ಭುತ ಕಾದಂಬರಿ 'ಕಾನೂರು ಸುಬ್ಬಮ್ಮ ಹೆಗ್ಗಡತಿ', ಕೋ. ಶಿ. ಕಾರಂತರ 'ಚೋಮನ ದುಡಿ', 'ಮರಳಿ ಮಣ್ಣಿಗೆ' ಗೊರೂರು ರಾಮಸ್ವಾಮಿ ಅಯ್ಯಂಗಾರರ 'ಹಳ್ಳಿಯ ಕಥೆಗಳು' ಚಿತ್ರಗಳನ್ನು ಬಿಟ್ಟರೆ ಬೇರೆ ಸಾಹಿತ್ಯವಿಲ್ಲ. ಹಳ್ಳಿಯ ಶ್ರಮಜೀವಿಗಳ ಸಹಜ ಚಿತ್ರವನ್ನು ಪುಟ್ಟಪ್ಪನವರೂ ಗೊರೂರರವರೂ ಕೊಟ್ಟಿದ್ದಾರೆ"[12] ಎಂಬುದು ಒಂದು ದೃಷ್ಟಿಯಿಂದ ಒಪ್ಪಿಕೊಳ್ಳಬಹುದಾದರೂ ಇವೆಲ್ಲ ಪ್ರಗತಿಶೀಲ ಧೋರಣೆಗೆ ಬದ್ಧವಾದವೆಂದು ಹೇಳಲಿಕ್ಕಾಗದು. ನವೋದಯದ ಪರಿಮಿತಿಯಲ್ಲಿಯೇ ಶ್ರಮಜೀವಿಗಳ, ದಲಿತರ ಜೀವನವನ್ನು ಚಿತ್ರಿಸುವ ಪ್ರಯತ್ನ ಇಲ್ಲಿಯದು ಅಷ್ಟೆ. ಅ.ನ.ಕೃ ಅವರು ತಮ್ಮ ಕೃತಿ 'ಸಾಹಿತ್ಯರತ್ನ' ವನ್ನು ಪ್ರಗತಿಶೀಲವೆಂದು ಹೇಳಿಕೊಂಡಿದ್ದಾರೆ. ಇದೂ ಕೂಡ ಸಂಪೂರ್ಣ ಸತ್ಯವಲ್ಲ. ಅ.ನ.ಕೃ. ಅವರ 'ನಗ್ನಸತ್ಯ', 'ಶನಿಸಂತಾನ', 'ಅಪರಂಜಿ' ಯಂಥ ಕೃತಿಗಳು ಅತ್ಯಂತ ಪ್ರಮುಖವಾದ ವೇಶ್ಯಾಸಮಸ್ಯೆಯನ್ನು ಎತ್ತಿಕೊಂಡಿದ್ದರೂ ಶಾಕ ತಟ್ಟಿಸುವಂಥವಾಗಿಲ್ಲ. ಸಾಮಾಜಿಕ ಮತ್ತು ಆರ್ಥಿಕ ಸಮಸ್ಯೆಗಳಿಗಿಂತ ಹೆಚ್ಚಾಗಿ ವಿಕೃತ ಕಾಮಜೀವನದ ಮೇಲೆ ಒತ್ತು ಬಿದ್ದು. ಅ.ನ.ಕೃ. ಅವರ ಪ್ರಗತಿಪರ ನಿಲುವು ಈ ಕಾದಂಬರಿಗಳಲ್ಲಿ ಗಟ್ಟಿಗೊಳ್ಳಲಿಲ್ಲ. ಆದರಿಂದಾಗಿ "ವಾಸ್ತವತೆಯ ಹೆಸರಿನಲ್ಲಿ ಜೀವನವನ್ನು ಹಿಡಿಯಲು ಹೋಗಿ ಅದರ ಪ್ರತಿಬಿಂಬವನ್ನು ಮಾತ್ರ ಕಲುಕಿದಂತಾಯಿತು."[13] ಎಂಬ ಟೀಕೆಗೆ ಅವರು ಗುರಿಯಾಗಬೇಕಾಯಿತು.

ಕಾದಂಬರಿ ಕ್ಷೇತ್ರದಲ್ಲಿ ತ.ರಾ.ಸು, ನಿರಂಜನ ಮತ್ತು ಬಸವರಾಜ ಕಟ್ಟೀಮನಿ ಪ್ರಗತಿಶೀಲರಾಗಿ ಮಹತ್ವದ ಕಾರ್ಯಮಾಡಿದರು.

ಅ.ನ.ಕೃ. ಅವರು ಕೆಲವು ನಾಟಕಗಳನ್ನು ಬರೆದರೂ ಅಲ್ಲಿ ಪ್ರಗತಿಶೀಲ ತತ್ತ್ವವನ್ನು ಪ್ರತಿಬಿಂಬಿಸಲಿಲ್ಲ ಈ ದಿಶೆಯಲ್ಲಿ ಕುವೆಂಪು ಅವರು ದಿಟ್ಟ ಹೆಜ್ಜೆಯನ್ನಿಟ್ಟರೆಂದು ಹೇಳಬಹುದು. ಅವರ 'ಶೂದ್ರತಪಸ್ವಿ', 'ಜಲಗಾರ', 'ಬೆರಳ್ಗೆ ಕೊರಳ್' ಈ ನಾಟಕಗಳು ಪ್ರಗತಿಶೀಲದ ಹಣೆಪಟ್ಟಿ ಹಚ್ಚಿಕೊಳ್ಳ

---

12 ಪ್ರಗತಿಶೀಲ ಸಾಹಿತ್ಯ ಪು.XXV

13 ಯುಗಧರ್ಮ ಹಾಗೂ ಸಾಹಿತ್ಯ ದರ್ಶನ ಕೆ.ವಿ. ಕುರ್ತಕೋಟಿ ಪು. ೨೬೨

ವಿದ್ದರೂ ಆ ಸಿದ್ಧಾಂತವನ್ನು ಸ್ವೀಕರಿಸಿದಂತಿವೆ. ಶ್ರೀರಂಗರು ತಮ್ಮ ಕೆಲವು ನಾಟಕಗಳಲ್ಲಿ ಸಾಮಾಜಿಕ ವೈಷಮ್ಯವನ್ನು ಚಿತ್ರಿಸಲು ಯತ್ನಿಸಿದ್ದಾರೆ. 'ಹರಿಜನ್ವಾರ', 'ಸಂಸಾರಿಕಂಸ', 'ಪ್ರಪಂಚ ಪಾಣಿಪತ್ತ' ಈ ಮುಂತಾದವು ಆ ಕಾಲದ ಪ್ರಮುಖ ನಾಟಕಗಳು. ಈ ನಾಟಕಗಳಲ್ಲಿ ಪ್ರಗತಿಯ, ಬಂಡಾಯದ ಮನೋಧರ್ಮವಿರುವುದು ತಟ್ಟನೆ ಕಂಡು ಬರುತ್ತದೆ.

ಕಾವ್ಯ ಪ್ರಕಾರಕ್ಕೆ ಬಂದಾಗ ಪ್ರಗತಿಶೀಲತೆ ಬಹಳ ಕಡಿಮೆ ಪ್ರಮಾಣದಲ್ಲಿ ಕಾಣಸಿಗುತ್ತದೆ. ಕುವೆಂಪು– 'ಕೋಗಲಿ ಸೋವಿಯಟ್ ರಷ್ಯ' ದಂಥ ಕೃತಿ ಪ್ರಕಟಿಸಿದ್ದರೂ ಅವರು ಅದೇ ಧೋರಣೆಯನ್ನು ಮುಂದುವರಿಸಲಿಲ್ಲ. ಗೋಪಾಲಕೃಷ್ಣ ಅಡಿಗರ 'ಕಟ್ಟುವೆವು ನಾವು' ಕವನ ಸಂಕಲನ ಪ್ರಗತಿಶೀಲ ತತ್ತ್ವವನ್ನು ಪ್ರತಿನಿಧಿಸುತ್ತಿದ್ದರೂ ಅವರು ಬಹುಬೇಗನೇ ನವ್ಯದ ಕಡೆಗೆ ವಾಲಿದರು. ಸು.ರಂ. ಯಕ್ಕುಂಡಿ ರಸಿಯನ್ ಕವಿತೆಗಳನ್ನು ಅನುವಾದಿಸಿದ್ದುದು ಗಮನಾರ್ಹವಾಗಿದೆ. ಚೆನ್ನವೀರ ಕಣವಿಯಂಥವರೂ ಕೆಲವು ಪ್ರಗತಿಶೀಲ ಕವಿತೆಗಳನ್ನು ಬರೆದಿದ್ದಾರೆ. ಹಾಗಿದ್ದರೂ ಕಾವ್ಯದಲ್ಲಿ ಪ್ರಗತಿಶೀಲ ಧೋರಣೆ ಬಹುಕಾಲದವರೆಗೆ ಬಹು ವ್ಯಾಪಕವಾಗಿ ನಿಲ್ಲಲಿಲ್ಲವೆಂಬುದು ಸತ್ಯಸಂಗತಿ. ಈಚೆಗಿನ ದಲಿತ ಬಂಡಾಯಗಳಲ್ಲಿ ಪ್ರಗತಿಶೀಲತೆ ಪುನರ್ಜನ್ಮ ಪಡೆದಿದ್ದರೂ ಇದೊಂದು ಹೊಸ ಚಳುವಳಿಯೇ ಆಗಿದೆ.

ಪ್ರಗತಿಶೀಲ ಸಾಹಿತ್ಯ ನಮ್ಮ ಸಾಹಿತ್ಯಕ್ಕೆ ಹೊಸ ಆಯಾಮವನ್ನು ತಂದುಕೊಟ್ಟದ್ದನ್ನು ಮರೆಯುವಂತಿಲ್ಲ. ನವೋದಯಕಾಲದಲ್ಲಿ ಮಧ್ಯಮ ವರ್ಗದವರ ಜೀವನವೇ ಕತೆ-ಕಾದಂಬರಿಗಳ ವಸ್ತುವಾಗಿತ್ತು. ಆದರ್ಶಪ್ರಿಯತೆ, ಕನಸುಗಾರಿಕೆ, ಭಾವಪರವಶತೆ ಅಲ್ಲಿ ಪ್ರಮುಖವಾಗಿದ್ದವು. ವಾಸ್ತವತೆ, ಶೋಷಿತ ಜನಾಂಗದ ಚಿತ್ರಣ ಪ್ರಗತಿಶೀಲದಲ್ಲಿ ಮಹತ್ವದ ಸ್ಥಾನ ಪಡೆದವು. ಕಲಾವಂತಿಕೆಗೆ ಒಂದಿಷ್ಟು ಚ್ಯುತಿಬಂದಿದ್ದರೂ ಅನುಭವದ ಸರಳೀಕರಣಕ್ಕೆ ಪಕ್ಕಾಗಿದ್ದರೂ ಪ್ರಗತಿಶೀಲ ಧೋರಣೆ ಸಾಧಿಸಿದ್ದು ಕಡಿಮೆ ಎನ್ನುವಂತಿಲ್ಲ. "ಇಡೀ ಸಮಾಜದ ಚಾರಿತ್ರಿಕ ಸಂದರ್ಭದಲ್ಲಿ ಪ್ರಗತಿಶೀಲ ಸಾಹಿತ್ಯವನ್ನು ತೂಗಿದಾಗ ಅದಕ್ಕೆ ಮೌಲ್ಯ ಬರುತ್ತದೆ. ಮೊದಲನೆಯ

ದಾಗಿ, ಅ.ನ.ಕೃ. ಮತ್ತು ಅವರ ಪಂಥದವರು ಓದುಗರ ವೃತ್ತವನ್ನು ಹಿಗ್ಗಿಸಿದರು............ ಅಲ್ಲದೆ ಸಾಹಿತ್ಯದಲ್ಲಿ .......ಸಾಮಾಜಿಕ ಪ್ರಜ್ಞೆಗೆ ಮಹತ್ವ ಬಂದಿತು. ಸಮಾಜದ ಸಮಸ್ಯೆಗಳ ಇರವಿನ ತಿಳಿವಳಿಕೆಯಷ್ಟೇ ಸಾಮಾಜಿಕ ಪ್ರಜ್ಞೆಯಲ್ಲ– ಎಂಬುದು ನಿಜ. ಆದರೆ ನಾವು ಬಯಸುವ ನಿರೀಕ್ಷಿಸುವ ಸಾಮಾಜಿಕ ಪ್ರಜ್ಞೆ ಮೂಡಲು ಮೊದಲು ಅಗತ್ಯವಾಗಿರುವುದು ಸಮಾಜದ ಸಮಸ್ಯೆಗಳನ್ನು ಕುರಿತು ನಿರ್ಭಯವಾಗಿ ಬರೆಯುವುದಕ್ಕೆ ಅವಕಾಶವಿರುವ ವಾತಾವರಣ. ಇಂತಹ ವಾತಾವರಣವನ್ನು ನಿರ್ಮಿಸು ವಲ್ಲಿ ಪ್ರಗತಿಶೀಲ ಸಾಹಿತ್ಯ ಪ್ರಮುಖ ಪಾತ್ರವಹಿಸಿತು."[14] ಎಂಬ ವಿಮರ್ಶ ಕರ ಅಭಿಪ್ರಾಯ ಪ್ರಗತಿಶೀಲ ಸಾಹಿತ್ಯದ ಮಹತ್ವವನ್ನು ಎತ್ತಿ ತೋರಿಸು ತ್ತದೆ. ಈ ದೃಷ್ಟಿಯಿಂದ ಅ.ನ.ಕೃ. ಅವರೂ ಹಾಗೂ ಅವರ ಪ್ರಗತಿಶೀಲ ಗೆಳೆಯರೂ ಮಾಡಿದ ಸಾಧನೆ ನಮ್ಮ ಸಾಹಿತ್ಯೇತಿಹಾಸದಲ್ಲಿ ಮರೆಯದಂಥ ಅಧ್ಯಾಯವಾಗಿದೆ.

— —

14 ಹೊಸಗನ್ನಡ ಸಾಹಿತ್ಯ; ಎಲ್. ಎಸ್. ಶೇಷಗಿರಿರಾವ್– ಪು. ೩೮

# ಅ.ನ.ಕೃ. ಅವರ ಜೀವನಚರಿತ್ರೆ, ಆತ್ಮಚರಿತ್ರೆ ಹಾಗೂ ವ್ಯಕ್ತಿಚಿತ್ರಣಗಳು

---

—ಎಸ್. ಎಸ್. ಕೋತಿನ

ಜೀವನ ಚರಿತ್ರೆಗಳು ಸಾಹಿತ್ಯದ ಒಂದು ಪ್ರಕಾರವಾಗಿ ಸ್ವಾರಸ್ಯವನ್ನು ಕೊಡುವುದರ ಜೊತೆಗೆ ಬದುಕಿಗೊಂದು ಪ್ರೇರಣೆಯನ್ನು, ಭರವಸೆಯನ್ನು ಒದಗಿಸಬಲ್ಲವೆಂಬ, ಆ ಮೂಲಕವಾಗಿ ಸಂಸ್ಕೃತಿಯ ಸಂವರ್ಧನೆಗೆ ಉತ್ತಮ ಮಾಧ್ಯಮಗಳಾಗಬಲ್ಲವೆಂಬ ಅರಿವು ನಮ್ಮಲ್ಲಿ ಕಳೆದೊಂದು ಶತಮಾನದಿಂದಲೂ ಬೆಳೆದು ಬಂದಿದ್ದರೂ ಅವು ಕಾದಂಬರಿ, ಸಣ್ಣಕಥೆಗಳಂತೆ ಸಮೃದ್ಧವಾಗಿ ಬೆಳೆದು ಬರಲಿಲ್ಲ. ಬೆಳವಣಿಗೆ ಹಾಗೂ ಸತ್ವದ ದೃಷ್ಟಿಯಿಂದ ನಾಟಕ, ಪ್ರವಾಸಸಾಹಿತ್ಯ, ಲಲಿತ ಪ್ರಬಂಧಗಳು ಕೊಡಬಲ್ಲಷ್ಟು ತೃಪ್ತಿಯನ್ನೂ— ಅಂದರೆ ಯಾವ ಪ್ರಕಾರಗಳ ಅಭಾವ ನಮ್ಮಲ್ಲಿದೆಯೆಂದು ಭಾವಿಸುತ್ತ ಬಂದಿದ್ದೆವೊ ಅಂಥವುಗಳೂ ಕೊಡುವ ತೃಪ್ತಿಯನ್ನೂ— ಜೀವನ ಚರಿತ್ರೆಗಳು ಕೊಡಲಿಲ್ಲ. ಇದುವರೆಗೆ ಪ್ರಕಟವಾದ ಕೃತಿಗಳಲ್ಲಿ ಕೆಲವು ರಚನೆಗಳು ಕನ್ನಡದಲ್ಲಿ ಉತ್ಕೃಷ್ಟ ಜೀವನಚರಿತ್ರೆಗಳು ಬೆಳೆದು ಬರಬಹುದಾಗಿದ್ದ ಸಾಧ್ಯತೆಗೆ ಮಾತ್ರ ನಿದರ್ಶನಗಳಾಗಿವೆ. ಇದಕ್ಕೆ ಜೀವನ ಚರಿತ್ರೆಯಂಥ ಕೃತಿಗಳು ಅನಿವಾರ್ಯವಾಗಿ ಕೆಲವು ಅಭಾವಗಳ ಮಧ್ಯದಲ್ಲಿ ಆತಂಕಗಳನ್ನು ಎದುರಿಸಿ ಅರಳಬೇಕಾದದ್ದು ಒಂದು ಮುಖ್ಯ ಕಾರಣ; ಕಾದಂಬರಿ ಹಾಗೂ ಜೀವನ ಚರಿತ್ರೆಗಳಲ್ಲಿ ಜ್ಞಾತಿ ಸಂಬಂಧ ಕಾಣಿಸಿಕೊಂಡರೂ ಅದಕ್ಕಿರುವ ಸೌಲಭ್ಯ ಇದಕ್ಕಿಲ್ಲ. ಕಾದಂಬರಿಕಾರ ತನ್ನ ಅನುಭವ ಹಾಗೂ ಅಧ್ಯಯನದ ವ್ಯಾಪ್ತಿಯಲ್ಲಿ ದೊರೆಯಬಹುದಾದ ಸಾಮಗ್ರಿಗಳನ್ನು ತನ್ನ ಧೋರಣೆಗೆ ಪೋಷಕವಾಗುವಂತೆ ಅಣಿಗೊಳಿಸಿಕೊಳ್ಳಬಲ್ಲ. ಕಲ್ಪನಾಶಕ್ತಿಯಿಂದ ಸನ್ನಿವೇಶಾದಿಗಳನ್ನು, ಮತ್ತು ಪಾತ್ರಗಳನ್ನು ಸೃಜಿಸಿಕೊಂಡು, ಕೆಲವು ಸಂದರ್ಭಗಳಲ್ಲಿ ಸಾಮಗ್ರಿಗಳ ಅಭಾವವನ್ನು ತುಂಬಿಕೊಳ್ಳುವ ಸ್ವಾತಂತ್ರ್ಯವನ್ನು ವಹಿಸಬಲ್ಲ; ಆದರೆ ಎಷ್ಟೇ ಸಮರ್ಥನಾಗಿರಲಿ ಜೀವನ ಚರಿತ್ರೆಕಾರನಿಗೆ ಇಂಥ ಸೌಲಭ್ಯವಿರುವದಿಲ್ಲ. ಇದರಿಂದಾಗಿ ಭಾವನಿಷ್ಠ

ತೆಯು ಸಮಸಮವಾಗಿ, ಬಹಳಷ್ಟು ಸಲ ಅದಕ್ಕಿಂತಲೂ ಹೆಚ್ಚಾಗಿ ವಸ್ತು ನಿಷ್ಠವಾಗಿ ವ್ಯವಹರಿಸಬೇಕಾದ ಲೇಖಕನಿಗೆ ಅನಿವಾರ್ಯವಾಗಿ ಸೀಮಿತ ಕಕ್ಷೆಯಲ್ಲಿ ತನ್ನೆಲ್ಲ ಕರಾಮತ್ತುಗಳನ್ನು ಅತ್ಯಂತ ಸಂಯಮತೆಯಿಂದ ಪ್ರದರ್ಶಿಸಿ ತನ್ನ ಉದ್ದೇಶವನ್ನು ಸಫಲಗೊಳಿಸಿಕೊಳ್ಳಬೇಕಾಗುತ್ತದೆ. ಕಾದಂಬರಿಕಾರನಂತೆ ಹೆಚ್ಚಿನ ಸ್ವಾತಂತ್ರ್ಯಕ್ಕೆ ಎಡೆಗೊಟ್ಟರೆ ಆತನ ಕೃತಿ, ಜೀವನ ಚರಿತ್ರೆಯಿಂದ ಗಡಿಪಾರುಗೊಳ್ಳುವ, ತನ್ನ ಸಹಜರೂಪವನ್ನು ಕಳೆದುಕೊಂಡು ಕುಲಗೆಡುವ ಅಪಾಯವಿರುವದರಿಂದ ಲೇಖಕನಾಗಿ ತನ್ನೆಲ್ಲ ಉತ್ಸಾಹವನ್ನು ನಿಯಂತ್ರಿಸಿಕೊಳ್ಳಬೇಕಾಗುತ್ತದೆ. ಮೇಲಾಗಿ ನಾಯಕನ ಸಾಧನೆ, ಅವನ ಕೊಡುಗೆಯ ಸ್ವರೂಪವನ್ನು ಬಿಂಬಿಸಬೇಕಾದಾಗ ಅವನ ಕಾರ್ಯಕ್ಷೇತ್ರದ ಅನುಭವ-ಜ್ಞಾನ ಹಾಗೂ ಗತಕಾಲೀನ ಮತ್ತು ಸಮ ಕಾಲೀನ ಪರಿಸರದ ಪ್ರಜ್ಞೆಯೂ ಅನಿವಾರ್ಯವಾಗುತ್ತದೆ. ಹೀಗೆ ಇಷ್ಟೆಲ್ಲ ಇಕ್ಕಟ್ಟಿನ ಮಧ್ಯದಲ್ಲಿ ಬೆಳೆದು ಬರುವ ಜೀವನ ಚರಿತ್ರೆಯಂಥ ಸಾಹಿತ್ಯ ಪ್ರಕಾರಗಳು ಓದುಗರನ್ನು ಆಕರ್ಷಿಸಿ ರಂಜಿಸುವುದೂ ಕಷ್ಟಸಾಧ್ಯ. ಅಂತೆಯೇ ಐತಿಹಾಸಿಕ, ಚಾರಿತ್ರಿಕ ಕಾದಂಬರಿಗಳನ್ನು ಬರೆಯಲು ತೋರುವ ಆಸಕ್ತಿಯನ್ನು ನಮ್ಮ ಲೇಖಕರು— ಸೀಮಿತ ಪ್ರಮಾಣದಲ್ಲಿ ಕಾದಂಬರಿಯ ಸಾಕಷ್ಟು ಅಂಶಗಳನ್ನು ಬಳಸಿಕೊಳ್ಳುವ ಸಾಧ್ಯತೆ ಇದ್ದಾಗಲೂ— ಜೀವನ ಚರಿತ್ರೆಗಳನ್ನು ಬರೆಯುವಲ್ಲಿ ತೋರಲಿಲ್ಲ

ಕಾರಣಗಳೇನೇ ಇರಲಿ ನಮ್ಮಲ್ಲಿ ಜೀವನ ಚರಿತ್ರೆ, ವ್ಯಕ್ತಿ ಚಿತ್ರಣಗಳು ಸಂಖ್ಯೆಯಲ್ಲಾಗಲಿ, ಸತ್ವದಲ್ಲಾಗಲಿ ಹುಲುಸಾಗಿ ಬೆಳೆಯಲಿಲ್ಲ; ಬೆಳೆದ ಕೃತಿಗಳ ಬಗ್ಗೆಯಾದರೂ ಓದುಗರಾಗಲಿ, ವಿಮರ್ಶಕರಾಗಲಿ, ವಿಶೇಷ ಗಮನ ವನ್ನು ಹರಿಸಲಿಲ್ಲ. ಎಲ್ಲಕ್ಕೂ ಹೆಚ್ಚಾಗಿ, ಒಂದು ಕಾಲಕ್ಕೆ ಲೀಲೆಗಾರನಂತೆ ಕಾಣಿಸಿಕೊಂಡು ಜನತೆಯಲ್ಲಿ ಸಾಹಿತ್ಯಿಕ ಅಭಿರುಚಿಯನ್ನು ಮೂಡಿಸಿ, ಗದ್ಯಸಾಹಿತ್ಯಕ್ಕೆ ಅದರಲ್ಲೂ ಕಾದಂಬರಿ ಸಾಹಿತ್ಯಕ್ಕೆ ಒಂದು ಬಗೆಯ ವೈಭವವನ್ನು ತಂದುಕೊಟ್ಟ ಅ.ನ.ಕೃಷ್ಣರಾಯರಂಥ ಲೇಖಕರ ಜೀವನ ಚರಿತ್ರೆ, ವ್ಯಕ್ತಿಚಿತ್ರಣಗಳೂ ವಿಮರ್ಶಕರ ಉಪೇಕ್ಷೆಗೆ ಪಾತ್ರವಾಗಿರುವುದು ವಿಸ್ಮಯಕಾರಿಯಾದ ಸತ್ಯಸಂಗತಿ. ಅಷ್ಟೇ ಅಲ್ಲ ಸಂದರ್ಭಾನುಸಾರವಾಗಿ ತಮ್ಮ ಇತರ ಕೃತಿಗಳನ್ನು, ಅವುಗಳ ಸ್ವರೂಪ, ಅವುಗಳ ಹಿಂದಿದ್ದ ಪ್ರೇರಣೆ

ವಿಮರ್ಶಕರ ಪ್ರತಿಕ್ರಿಯೆಗಳನ್ನು ಕುರಿತು ಹಿತಮಿತವಾಗಿ, ಕೆಲವು ಸಲ ಅತಿಯಾಗಿ ತಮ್ಮ ಆತ್ಮಕಥೆಯಲ್ಲಿ ಹೇಳಿಕೊಂಡಿರುವ ಅ.ನ.ಕೃ, 'ಕೈಲಾಸಂ' ಕೃತಿಯನ್ನು ಹೊರತುಪಡಿಸಿ ತಾವು ಬರೆದ ಜೀವನ ಚರಿತ್ರೆ- ವ್ಯಕ್ತಿ ಚಿತ್ರಣಗಳ ಬಗ್ಗೆ ಚಕಾರವನ್ನೆತ್ತದಿರುವದೂ ದೊಡ್ಡಸೋಜಿಗ. ಅ.ನ.ಕೃ. ಅವರು ತಮ್ಮ ಅಭಿವ್ಯಕ್ತಿಯ ಸಾಮರ್ಥ್ಯ ಹಾಗೂ ಸಾರ್ಥಕತೆಯನ್ನು ಕಾದಂಬರಿಯ ಮಾಧ್ಯಮದಲ್ಲಿ ಕಂಡುಕೊಂಡಿರುವುದು ಮತ್ತು ಜೀವನ ಚರಿತ್ರೆಯಂಥ ಪ್ರಕಾರಗಳನ್ನು ಆಸ್ವಾದಿಸಲು ಬೇಕಾಗುವ ವಿಶೇಷ ಸಂಸ್ಕಾರವನ್ನು ನಮ್ಮ ಜನ ಬೆಳೆಸಿಕೊಂಡು ಬರದಿರುವುದು ಈ ಎಲ್ಲ ಉಪೇಕ್ಷೆಗೆ ಮುಖ್ಯಕಾರಣ. "ಪ್ರಬಂಧ, ಸಣ್ಣಕಥೆ, ನಾಟಕಗಳನ್ನು ನಾನು ಉಪೇಕ್ಷಿಸಲಿಲ್ಲವಾದರೂ ಕಾದಂಬರಿ ರಚನೆಗೇ ಹೆಚ್ಚುಗಮನವಿತ್ತೆ, ನಾನು ಸಾಹಿತ್ಯವನ್ನೇ ಜೀವನಾಧಾರ ಮಾಡಿಕೊಂಡಿದ್ದೇ ಇದರ ಮೂಲಕಾರಣ. ಇತರ ಸಾಹಿತ್ಯ ಪ್ರಕಾರಗಳನ್ನು ಪ್ರಕಾಶಕರು ಹೆಚ್ಚಾಗಿ ಸ್ವಾಗತಿಸಲಿಲ್ಲ"[1] ಎಂಬ ರಾಯರ ಮಾತು ಜೀವನ ಚರಿತ್ರೆ, ವ್ಯಕ್ತಿಚಿತ್ರಣಗಳಿಗೂ ಅನ್ವಯಿಸು ವಂತಿದೆ.

ಒಟ್ಟಿನಲ್ಲಿ ಜೀವನ ಚರಿತ್ರೆ ಸಾಹಿತ್ಯದ ಒಂದು ವಿಶಿಷ್ಟ ಪ್ರಕಾರವಾಗಿ ಹೊಯ್ದಾಡುತ್ತ ನಿಂತುಕೊಂಡ ಕಾಲದಲ್ಲಿ ವೃತ್ತಿಲೇಖಕರಾದ ರಾಯರು ಜೀವನ ಚರಿತ್ರೆ ವ್ಯಕ್ತಿಚಿತ್ರಣಗಳ ರಚನೆಗೆ ತೊಡಗಿದ್ದುದು ಸಾಹಿತ್ಯ ಹಾಗೂ ಸಾಂಸ್ಕೃತಿಕ ಪರಿಸರದ ದೃಷ್ಟಿಯಿಂದ ತೀರ ಮಹತ್ವದ ಸಾಹಸ. ಕನ್ನಡ ಸಾಹಿತ್ಯದಲ್ಲಿ ಜೀವನ ಚರಿತ್ರೆಯಂಥ ಪ್ರಕಾರಗಳಿಗೆ ಸ್ವತಂತ್ರ ಅಸ್ತಿತ್ವವನ್ನು ತಂದು ಕೊಡುವಲ್ಲಿ ನೆರವಾದ ಶ್ರೇಯಸ್ಸು ಅವುಗಳದಾಗಿದೆ.

ಅ.ನ.ಕೃ ಅವರು ಸಾಹಿತ್ಯದ ಈ ಪ್ರಕಾರಕ್ಕೆ ಕೊಟ್ಟ ಕೊಡುಗೆಗಳಲ್ಲಿ ಅಲ್ಲಮಪ್ರಭು (೧೯೫೯), ದೀನಬಂಧು ಕಬೀರ (೧೯೫೮), ವಿಶ್ವಬಂಧು ಬಸವೇಶ್ವರ (೧೯೫೯), ಕೈಲಾಸಂ (೧೯೪೭), ನಿಡುಮಾಮಿಡಿ ಸನ್ನಿಧಿ ಯವರು (೧೯೫೧), ಸ್ವಾಮಿವಿವೇಕಾನಂದ, ಮುಕ್ತಜೀವಿ ಸರ್ವಜ್ಞ, ಭಾರತದ ಬಾಪು, ಎಂಬವು ಜೀವನ ಚರಿತ್ರೆಗಳಾದರೆ ಕನ್ನಡ ಕುಲರಸಿಕರು

---

1 "ಬರಹಗಾರನ ಬದುಕು" (೧೯೭೦) ಪು. ೨೨೯

(೧೯೫೭), ಕರ್ನಾಟಕದ ಕಲಾವಿದರು (ಭಾಗ ೧ ಮತ್ತು ೨) ಎಂಬ ಈ ಮೂರು ಕೃತಿಗಳು ವ್ಯಕ್ತಿಚಿತ್ರಣಗಳ ಸಂಗ್ರಹಗಳಾಗಿವೆ; ನನ್ನನ್ನು ನಾನೇ ಕಂಡೆ (೧೯೪೪) ಎಂಬುದು ಸ್ವದರ್ಶನ ಹಾಗೂ ಬರಹಗಾರನ ಬದುಕು (೧೯೬೮) ಎಂಬುದು ಆತ್ಮಕಥೆಯಾಗಿದೆ ಎನ್ನುವುದು ಸಾಮಾನ್ಯ ಗ್ರಹಿಕೆ.

ಆದರೆ ಕೈಲಾಸಂ, ನಿಡುಮಾಮಿಡಿ ಸನ್ನಿಧಿಯವರು, ಅಲ್ಲಮಪ್ರಭು, ವಿಶ್ವಬಂಧು ಬಸವೇಶ್ವರ—ಈ ಮೊದಲಾದ ಕೃತಿಗಳ ತಲೆಬರಹಗಳು ಅವು ಜೀವನ ಚರಿತ್ರೆಗಳೆಂಬ ಭ್ರಮೆಯನ್ನು ಹುಟ್ಟಿಸಬಹುದಾದರೂ ವಸ್ತು ವಿಧಾನ, ಉದ್ದೇಶ, ಪರಿಣಾಮ ಹಾಗೂ ಸ್ವಾರಸ್ಯಗಳ ಹಿನ್ನೆಲೆಯಿಂದ ನೋಡಿದರೆ ಅವೆಲ್ಲ ನಿಜವಾದ ಜೀವನ ಚರಿತ್ರೆಯ ಸ್ವರೂಪ ಮತ್ತು ವ್ಯಾಪ್ತಿಯನ್ನು ಮೀರಿನಿಂತ ವಿಮರ್ಶಾತ್ಮಕ ಕೃತಿಗಳಾಗಿಯೊ, ವೈಚಾರಿಕ, ಸಂಶೋಧನಾತ್ಮಕ ಪ್ರಬಂಧಗಳಾಗಿಯೋ ಕಾಣಿಸಿಕೊಳ್ಳುತ್ತವೆ. ಅವುಗಳನ್ನು ಜೀವನ ಚರಿತ್ರೆಗಳ ಸಾಲಿನಲ್ಲಿ ಸಿಲ್ಲಿಸುವುದೆಂದರೆ ಆ ಕೃತಿಗಳಿಗೆ ಮಾತ್ರವಲ್ಲ ಜೀವನ ಚರಿತ್ರೆಯ ಪ್ರಕಾರಕ್ಕೂ ಅಪಚಾರ ಮಾಡಿದಂತಾಗುತ್ತದೆ. ಅ.ನ.ಕೃ ಅವರ ಕೃತಿಗಳ ಕೊನೆಯಲ್ಲಿ, ಅಭಿನಂದನ ಗ್ರಂಥಗಳ ಕೊನೆಯಲ್ಲಿ ಅವರ ಕೃತಿಗಳ ಯಾದಿಯನ್ನು ಕೊಡುವಾಗ ಈ ಎಲ್ಲ ಗ್ರಂಥಗಳನ್ನು ಜೀವನ ಚರಿತ್ರೆಗಳಲ್ಲಿ ಸೇರ್ಪಡಿಸಿರುವುದು – ತಲೆಬರಹಗಳನ್ನು ಮಾತ್ರ ನೋಡಿ ಮೋಸ ಹೋದುದರ ಪರಿಣಾಮವಾಗಿದೆ.

'ನಿಡುಮಾಮಿಡಿ ಸನ್ನಿಧಿಯವರು' ಈ ಕೃತಿ ಶ್ರೀಗಳವರ ೧೨ ನೆಯ ವಾರ್ಷಿಕೋತ್ಸವದ ಸವಿನೆನಪಿಗಾಗಿ ಅವರ ಕೃತಿಗಳನ್ನು ಕುರಿತು ಗ್ರಂಥ ಬರೆದು ಕೊಡಬೇಕೆಂದು ಕೇಳಿದ ಮಂಡಳಿಯ ಆಸೆಯನ್ನೀಡೇರಿಸಲು ಮೂಡಿ ಬಂದ ಕೃತಿಯಾಗಿದೆ. ಆದ್ದರಿಂದ ಸಹಜವಾಗಿಯೇ ಇಲ್ಲಿ ಅವರ ಗ್ರಂಥಗಳ ವಿಮರ್ಶೆಯನ್ನೇ ಪ್ರಧಾನ ಉದ್ದೇಶವನ್ನಾಗಿ ಇಟ್ಟುಕೊಳ್ಳಲಾಗಿದೆ.[2] ಅದಕ್ಕೆ ಪೂರಕ ಮಾತ್ರವೆನ್ನುವಂತೆ ಕೇವಲ ೧೪ ಪುಟಗಳಲ್ಲಿ ಲೇಖಕರ ಪರಿಚಯವನ್ನು ಮಾಡಿಕೊಡಲಾಗಿದೆ.

'ಕೈಲಾಸಂ' ಕೃತಿಯನ್ನು ಕುರಿತೂ ಇದೇ ಮಾತನ್ನು ಹೇಳಬಹುದಾಗಿದೆ. ೨೯ ವರುಷಗಳ ಕಾಲ ಕೈಲಾಸಂ ಅವರನ್ನು ಬಹಳ ಹತ್ತಿರದಿಂದ

---

[2] ನೋಡಿರಿ— 'ಶ್ರೀ ನಿಡುಮಾಮಿಡಿ ಸನ್ನಿಧಿಯವರು' (೧೯೫೭) ಮುನ್ನುಡಿ ಪು V

ನೋಡಿದ ಅ.ನ.ಕೃಷ್ಣರಾಯರು, ಅವರ ಜೀವನವನ್ನು ಸುಮಾರು ಮೂವತ್ತೆಂಟು ಪುಟಗಳಷ್ಟು ವಿಸ್ತಾರವಾಗಿ ಬಳಸಿಕೊಂಡಿದ್ದರೂ, ಕೃತಿಯ ಉದ್ದೇಶದ ದೃಷ್ಟಿಯಿಂದ ಅದು ತೀರ ಗೌಣ. ಸುಮಾರು ೨೦೦ ಪುಟಗಳ ಈ ಕೃತಿಯಲ್ಲಿ ಮಿಕ್ಕೆಲ್ಲ ಪುಟಗಳು ಅವರ ಸಮಗ್ರ ಕೃತಿಗಳ ವಿಮರ್ಶೆಗಾಗಿಯೇ ಮೀಸಲಾಗಿರುವದು, ಆರಂಭದಲ್ಲಿ ಕನ್ನಡ ನಾಟಕಗಳ ಪ್ರಾಚೀನತೆಯನ್ನು ಕುರಿತು ವಿವರಿಸಿರುವುದು ಇಲ್ಲಿ ಸ್ಮರಣಾರ್ಹವಾಗಿದೆ. "ಒಬ್ಬ ಸಮಕಾಲೀನ ಲೇಖಕನ ಕೃತಿಗಳ ಸಮಗ್ರ ಅವಲೋಕನ ಮೂಡಿರುವ ಗ್ರಂಥಗಳಲ್ಲಿ ನನ್ನ ಕೈಲಾಸಂ ಗ್ರಂಥವೇ ಮೊದಲಿನದೆನ್ನಬಹುದು"[3] ಎಂಬ ಸ್ವತಃ ರಾಯರ ಮಾತೂ ಈ ಕೃತಿಯ ಉದ್ದೇಶ ಮತ್ತು ಸ್ವರೂಪವನ್ನು ನಿರ್ದೇಶಿಸುತ್ತದೆ.

ಒಂದು ವ್ಯಕ್ತಿಯ ಜೀವನ ಚರಿತ್ರೆಯಲ್ಲಿ ಅವನ ಸಾಧನೆ, ಸಿದ್ಧಿ, ಪ್ರತಿಭೆ ಹಾಗೂ ಆ ಕ್ಷೇತ್ರಕ್ಕೆ ಕೊಟ್ಟ ಕೊಡುಗೆಯ ವಿವರವೆಲ್ಲವೂ ಅಳವಡಬೇಕಾದದ್ದು ಸಹಜವಾದರೂ ಅವೆಲ್ಲ ಜೀವನ ಚರಿತ್ರೆಯ ಒಳಪಿಂಡವಾಗಿ ಕಾಣಿಸಿಕೊಳ್ಳಬೇಕಾಗುತ್ತದೆ; ಆತನ ಕೃತಿಗಳು ಮೂಡಿಬರುವಾಗ ಆತನಿಗಿದ್ದ ಪರಿಸರ, ಪ್ರೇರಣೆ, ಉತ್ಸಾಹ, ನಿರುತ್ಸಾಹ, ಅಂತರಂಗದ ಪದರು-ಪರಿಗಳನ್ನು ಭಾವಪೂರ್ಣವಾಗಿ ಅನುಭವಕ್ಕೆ ತಂದುಕೊಡಬೇಕಾಗುತ್ತದೆ. ಈ ಎಲ್ಲ ಅಂಶಗಳು ಈ ಗ್ರಂಥಗಳಲ್ಲಿ ಕಾಣಿಸಿಕೊಳ್ಳದಿರುವುದಕ್ಕೆ ಮುಖ್ಯವಾಗಿ ಅವು 'ಜೀವನ ಚರಿತ್ರೆ'ಗಳಲ್ಲ ಎಂಬುದು ಕಾರಣವಾಗಿದೆ.

'ಅಲ್ಲಮಪ್ರಭು' ಪ್ರಭುವಿನ ೨೦೯ ವಚನಗಳ ಸಂಗ್ರಹವನ್ನುಳ್ಳ ಒಂದು ಸಣ್ಣ ಹೊತ್ತಗೆ. ಅದಕ್ಕೆ ಪ್ರಸ್ತಾವನೆಯೆನ್ನುವಂತೆ—ಪ್ರಭುವಿನ ಗೊಂದಲಮಯವಾದ, ಸಮಸ್ಯಾತ್ಮಕವಾದ ಜೀವನ ವೃತ್ತಾಂತವನ್ನು, ಆತನ ಪ್ರಚಂಡ ವ್ಯಕ್ತಿತ್ವ, ಸಾಧನೆಯ ಮಾರ್ಗ-ದರ್ಶನವನ್ನು ಮತ್ತು ವಿಶ್ವಧರ್ಮದ ಇತಿಹಾಸದಲ್ಲಿ ಆತನಿಗಿರುವ ಅಸ್ವಾದೃಶ ಸ್ಥಾನವನ್ನು ವಚನಗಳ ಹಾಗೂ ಪ್ರಾಚೀನ ಕಾವ್ಯಗಳ ಆಧಾರದಿಂದ ವಿವರಿಸಲು ಯತ್ನಿಸಲಾಗಿದೆ. ಹೀಗಾಗಿ ಇದೊಂದು ಸಂಶೋಧನಾತ್ಮಕ, ಚಿಂತನಾತ್ಮಕ ಹಾಗೂ ವೈಚಾರಿಕ

---

3 "ಬರಹಗಾರನ ಬದುಕು" (೧೯೭೦)೨೨೯ :

ಪ್ರಬಂಧದ ಬಿಗುವನ್ನು ಹೊಂದಿದೆಯೇ ಹೊರತು ಜೀವನ ಚರಿತ್ರೆಯ ಉದ್ದೇಶ ಹಾಗೂ ಸ್ವಾರಸ್ಯವನ್ನು ಒಳಗೊಂಡಿಲ್ಲ. "ಅಲ್ಲಮಪ್ರಭು ನನ್ನ ಆರಾಧ್ಯ ದೇವತೆ"[4] ಎಂದು ಹೇಳಿಕೊಂಡ ರಾಯರು, ಅಲ್ಲಮ ಪ್ರಭುವನ್ನು ಕುರಿತು ಬೃಹದ್ಗ್ರಂಥ ಬರೆಯುವ ತಮ್ಮ ಕನಸು ಕಾರಣಾಂತರದಿಂದ ಕುಸಿದು ಹೋದಾಗ "ಪ್ರಭುವಿನ ಬಗ್ಗೆ ನಾನು ಬರೆದಿರುವ ಕೆಲವು ಲೇಖನ ಗಳು, ವಚನ ಪಾಠವಾದರೂ ಒತ್ತಟ್ಟಿಗಿರಲಿ ಎಂದು ಈ ಸಣ್ಣ ಹೊತ್ತಗೆ ಯನ್ನು ಪ್ರಕಟಿಸುತ್ತಿದ್ದೇನೆ"[5] ಎಂದು ಹೇಳಿಕೊಂಡಿರುವದು ಈ ಕೃತಿಯ ಜಾಯಮಾನವನ್ನು ಸ್ಪಷ್ಟಪಡಿಸುವಂತಿದೆ.

"ವಿಶ್ವಬಂಧು ಬಸವೇಶ್ವರ" ವೂ ಕೂಡ ೮೧ ಪುಟಗಳ ಚಿಕ್ಕ ಪುಸ್ತಿಕೆ. ಬಸವ ಜಯಂತ್ಯುತ್ಸವ ಸಂದರ್ಭಗಳಲ್ಲಿ ಹೊರಟ ವಿಶೇಷ ಸಂಚಿಕೆಗಳಿಗೆ ಅ.ನ.ಕೃ. ಅವರು ಬರೆದ ಲೇಖನಗಳ, ಆಕಾಶವಾಣಿಯ ಪ್ರಸಾರಕ್ಕೆ ಬರೆದ ಪ್ರಬಂಧಗಳ ಸಂಗ್ರಹವಾಗಿದೆಯೇ ಹೊರತು ಜೀವನ ಚರಿತ್ರೆಯಲ್ಲ. ಆದರೆ ಸ್ಥೂಲವಾಗಿಯಾದರೂ ಚಿಂತೆಯಿಲ್ಲ ಬಸವಣ್ಣನವರ ಜೀವನ ಚರಿತ್ರೆಯನ್ನು ಒಳಗೊಂಡು ಸಾಹಿತ್ಯಿಕ ಸ್ವಾರಸ್ಯವನ್ನು ಪಡೆದಿರುವದು ಅವರ "ಬಸವಣ್ಣ ನವರ ಅಮೃತವಾಣಿ." ಇದರಲ್ಲಿ ಬಸವಣ್ಣನವರ ಜೀವನ ಚರಿತ್ರೆಯದು ಒಂದು ಭಾಗವಾದರೆ, ದರ್ಶನ ಸಿದ್ಧಾಂತಗಳನ್ನೊಳಗೊಂಡ ಅವರ ಅಮೃತ ವಾಣಿಯ ಸಂಗ್ರಹ ಎರಡನೆಯ ಭಾಗ; ಅನುಬಂಧಗಳನ್ನುಳಿದು ಒಟ್ಟು ೧೪೯ ಪುಟಗಳ ಈ ಕೃತಿಯಲ್ಲಿ ಬಸವಣ್ಣನವರ ಚರಿತ್ರೆ ೯೦ ಪುಟಗಳವರೆಗೆ ವ್ಯಾಪಿಸಿ ಕೊಂಡಿದೆ. ಇದರಲ್ಲಿ ವೀರಶೈವಪುರಾಣ, ಕಾವ್ಯ, ಶಾಸನಗಳಲ್ಲಿ ವ್ಯಕ್ತ ವಾದ ವಿಷಯವನ್ನು ಚಾರಿತ್ರಿಕ ದೃಷ್ಟಿಯಿಂದ ಸಂಯೋಜಿಸಿ ವಾಸ್ತವದ ನೆಲಗಟ್ಟಿನಮೇಲೆ ಬಸವಣ್ಣನವರ ಜೀವನವನ್ನು ಮೂರ್ತಗೊಳಿಸುವ ಪ್ರಯತ್ನ ಹೆಚ್ಚು ಗಮನ ಸೆಳೆಯುವಂತಿದೆ. ಬಸವಣ್ಣನವರ ಜೀವನದ ಬಗ್ಗೆ ಇರುವ ವಿವಾದಾಸ್ಪದ ವಿಷಯಗಳನ್ನು ಚರ್ಚಿಸುವ ಗೊಡವೆಗೆ ಹೋಗದೆ, ಜನಸಾಮಾನ್ಯರಿಗೆ ಬಸವಣ್ಣನವರ ದಿವ್ಯಜೀವನವನ್ನು ಮನ

4 ಅಲ್ಲೇ, ಪು–೨೩೮

5 'ಅಲ್ಲಮಪ್ರಭು' (೧೯೪೯) ಮುನ್ನುಡಿ. P-VI

ಗಾಣಿಸುವ, ಬಸವಣ್ಣನವರು ಜಗಜ್ಯೋತಿಗಳ ಸಾಲಿಗೆ ಸೇರಿದವರೆಂದು ತೋರಿಸಿಕೊಡುವ ಉದ್ದೇಶ ಇಲ್ಲಿ ಗೋಚರವಾಗುತ್ತದೆ.

ಉಪನಯನವನ್ನು ಧಿಕ್ಕರಿಸಿ, ತಂದೆಯ ಕೋಪಕ್ಕೆ ತುತ್ತಾಗಿ, ಊರು ತೊರೆದು ಜಾತವೇದಮುನಿಗಳಿದ್ದ ಕೂಡಲಸಂಗಮಕ್ಕೆ ಬರುವ ಸಂದರ್ಭ ಹಾಗೂ ಅಲ್ಲಿಯ ಪ್ರಶಾಂತ ವಾತಾವರಣ ಭಾವಪೂರ್ಣವಾಗಿ ಮೂಡಿ ಬಂದಿದೆ. ಸಂಗಮದಿಂದ ಕಲ್ಯಾಣಕ್ಕೆ ಪ್ರಯಾಣ ಮಾಡುವ ಪ್ರಸಂಗ, ಮಂತ್ರಿ ಬಲದೇವನ ಮಗಳಾದ ಗಂಗಾಂಬಿಕೆಯನ್ನು ಸಿದ್ಧರಸನ ಮಗಳಾದ ನೀಲಲೋಚನೆಯನ್ನು ಮದುವೆಯಾದ ವಿಷಯ, ಬಿಜ್ಜಳ–ಸಿದ್ಧರಸ–ನೀಲಾಂಬಿಕೆಯರ ಸಂಬಂಧ— ಇವೆಲ್ಲ ಐತಿಹಾಸಿಕ ಬೆಂಬಲದೊಂದಿಗೆ ವಾಸ್ತವತೆಯನ್ನು ಪಡೆದಿವೆ. ರಾಜ್ಯದ ಭಂಡಾರ ತುಂಬಿದುದರ ಹಿಂದಿರುವ ಪರಂಪರಾಗತವಾದ ಪವಾಡವನ್ನು ತ್ಯಜಿಸಿ ಬಂಕದೆರೆ, ಸಿದ್ಧಾದಾಯದಂಥ ೧೩ ಪ್ರಕಾರದ ಹೊಸ ತೆರಿಗೆಗಳನ್ನು ನಿಯೋಜಿಸಿದ ಐತಿಹಾಸಿಕ ಅಂಶಗಳನ್ನು ಮುಂದೆ ಮಾಡಿರುವದು ಅ.ನ.ಕೃ. ಅವರ ವಾಸ್ತವ ಹಾಗೂ ಚಾರಿತ್ರಿಕ ಪ್ರಜ್ಞೆಗೆ ನಿದರ್ಶನವಾಗಿದೆ ಚಾಲುಕ್ಯ ಸಿಂಹಾಸನವನ್ನು ಅಪಹರಿಸಿದ ಬಿಜ್ಜಳ ತನ್ನ ಊಹೆಗೂ ಮೀರಿದ ಬಸವಣ್ಣನವರ ಕಾರ್ಯಕಲಾಪಗಳನ್ನು ಸಂಶಯ ದೃಷ್ಟಿಯಿಂದ ನೋಡಲಾರಂಭಿಸಿ, ಮಂಚಣ್ಣನಂಥವರ ಕಿವಿಯೂದಿಗೆ ಮಬ್ಬಾಗಿ ಭಿನ್ನಾಭಿಪ್ರಾಯವನ್ನು ಹೊಂದಿದ್ದು, ಮಧುವರಸನ ಮಗಳಿಗೂ, ಹರಳಯ್ಯನ ಮಗನಿಗೂ ಪ್ರೇಮ ಬೆಳೆದು ಶರಣರ ಅನುಮತಿಯಂತೆ ವಿವಾಹವೇರ್ಪಟ್ಟದ್ದು, ಅದುವೇ ಒಂದು ನೆಪವಾಗಿ ಬಿಜ್ಜಳ ಹರಳಯ್ಯ– ಮಧುವರಸರಿಗೆ ಶಿಕ್ಷೆ ವಿಧಿಸಿದ್ದು, ಶರಣರಲ್ಲಿ ಪ್ರಜ್ವಲಿಸಿದ ಸೇಡಿನ ಭಾವನೆ ಕ್ರಾಂತಿಯ ದಳ್ಳುರಿಯಾದದ್ದು ಹಾಗೂ ತಮ್ಮ ಉದ್ದೇಶ ಭಂಗವಾದದ್ದಕ್ಕೆ ಉಂಟಾದ ಬಸವಣ್ಣನವರ ಮನೋವ್ಯಥೆ ಸಂಗಮಕ್ಕೆ ಹೋದ ಅವರ ಬಾಳದೀಪವನ್ನು ನಂದಿಸಿಬಿಟ್ಟದ್ದು —ಇವೆಲ್ಲ ಸಂಗತಿಗಳು ಜೀವನ ಚರಿತ್ರೆಗೆ ಒಪ್ಪುವಂತೆ ಅತ್ಯಂತ ಸ್ವಾಭಾವಿಕವಾಗಿ, ಅನುದ್ರಿಕ್ತವಾಗಿ ಮೂಡಿಬಂದಿವೆ. ಆದರೆ ವಿವಾದಾಸ್ಪದವಾದ ಒಂದೊಂದು ಸಂದರ್ಭ, ಸನ್ನಿವೇಶದಲ್ಲಿಯ ಗೊಂದಲವನ್ನು ಪರಿಹರಿಸಿಕೊಳ್ಳಲು ಅವುಗಳನ್ನು ಕುರಿತು ನಡುನಡುವೆ ಚರ್ಚೆಗೆ ತೊಡಗುವದು ರಸಾಭಾಸಕ್ಕೆ ಎಡೆಗೊಡುತ್ತದೆ. ಈ

ಎಲ್ಲ ವಿಷಯುಗಳನ್ನು ಪ್ರತ್ಯೇಕವಾಗಿ ಪ್ರಸ್ತಾವನೆಯಲ್ಲಿಯೊ, ಅಡಿ ಟಿಪ್ಪಣಿಯಲ್ಲಿಯೊ ಚರ್ಚಿಸಿ ಜೀವನ ಚರಿತ್ರೆಯನ್ನು ಸ್ವತಂತ್ರವಾಗಿ ಮುಂದುವರೆಸಿದ್ದರೆ ಇನ್ನೂ ಹೆಚ್ಚಿನ ಸ್ವಾರಸ್ಯ ಕಾಣಿಸಿಕೊಳ್ಳುವ ಸಾಧ್ಯತೆ ಇತ್ತು. ಹರಿಹರನ ರಗಳೆಯ ಸಾಲುಗಳನ್ನು, ಬಸವಣ್ಣನವರ ವಚನಗಳನ್ನು ಅವರ ವ್ಯಕ್ತಿತ್ವವನ್ನು ಸ್ಫುಟಗೊಳಿಸುವ ಉದ್ದೇಶದಿಂದ ಹೆಚ್ಚು ಔಚಿತ್ಯಪೂರ್ಣವಾಗಿ ಬಳಸಿಕೊಂಡದ್ದು ಕೃತಿಗೆ ಹೆಚ್ಚಿನ ತೂಕ ತಂದಿದೆ.

'ಭಾರತದ ಬಾಪು'— ತಮ್ಮ ಜೀವನದುದ್ದಕ್ಕೂ ಮಹಾಸಾಧಕರಾಗಿ ಮಹೋನ್ನತ ಆದರ್ಶ ಮತ್ತು ತತ್ವಗಳನ್ನು ಅನುಷ್ಠಾನಕ್ಕೆ ತಂದು ಪವಾಡ ಸದೃಶವಾದ ಅದ್ಭುತ ಕ್ರಾಂತಿಯನ್ನೆಸಗಿದ ಮಹಾತ್ಮಾಗಾಂಧಿಯವರ ಜೀವನ, ಹೋರಾಟ ಹಾಗೂ ಅವರ ಅಸಾಧಾರಣ ವ್ಯಕ್ತಿತ್ವದ ಪರಿಚಯವನ್ನು ಮಾಡಿಕೊಡುವ ಸೊಗಸಾದ ಕಾದಂಬರಿಯ ರೀತಿಯಿಂದ ಸಫಲಗೊಂಡ ಕೃತಿಯಾಗಿದೆ. ಸ್ವಾತಂತ್ರ್ಯ ಸಂಗ್ರಾಮದ ಚೇತೋಹಾರಿಯಾದ ಪರಿಸರದಲ್ಲಿ ರೂಪಗೊಂಡ ವ್ಯಕ್ತಿತ್ವದ ಅ.ನ.ಕೃ. ಅವರು ಸ್ವಾಭಾವಿಕವಾಗಿಯೇ ಬಾಪೂಜಿಯ ಪ್ರಭಾವಕ್ಕೆ ಒಳಗಾದವರು. ಎಷ್ಟರ ಮಟ್ಟಿಗೆಂದರೆ– ವಿದೇಶವಸ್ತ್ರಗಳ ಬಹಿಷ್ಕಾರದ ನಿರೂಪ ಗಾಂಧೀಜಿಯವರಿಂದ ಬಂದಕೂಡಲೇ ತಮ್ಮ ವಸ್ತ್ರಗಳನ್ನು ದಹಿಸಿ ಖಾದಿ ಧರಿಸಲಾರಂಭಿಸಿದವರು ಕೊನೆಯವರೆಗೂ ಖಾದಿಯನ್ನೇ ಧರಿಸಿದರು.[6] ಆ ವ್ಯಕ್ತಿತ್ವದ ಪ್ರಭಾವ ಈ ಕೃತಿಯ ಮೂಲಪ್ರೇರಣೆ. ಮಹಾತ್ಮಾಗಾಂಧಿಯವರ ಆತ್ಮಕಥೆಯೇ ಮುಂದಿರುವಾಗ, ಅಂದಿನ ಅವರ ಚಟುವಟಿಕೆಗಳನ್ನು, ಹೋರಾಟದ ಸ್ವರೂಪವನ್ನು ಬೆಳಗೆದ್ದರೆ ತಿಳಿದುಕೊಳ್ಳುವದು ಸಾಧ್ಯವಿದ್ದಾಗ ಮತ್ತು ಅವರ ಸಮಕಾಲೀನ ವ್ಯಕ್ತಿಗಳೂ ತಮ್ಮ ಸಮಕಾಲೀನರೇ ಎನಿಸಿರುವಾಗ ಅವರ ಜೀವನ ಚರಿತ್ರೆಗೆ ಸಂಬಂಧಿಸಿದ ಸಾಮಗ್ರಿಗಳನ್ನು ಸಂಗ್ರಹಿಸುವದು ಅಷ್ಟೊಂದು ಪರಿಶ್ರಮದ ಕೆಲಸವೆನಿಸಲಿಕ್ಕಿಲ್ಲ. ಆದರೆ ಅಂಥ ಮಹಿಮಾನ್ವಿತನೊಬ್ಬನ ವ್ಯಾಪಕವಾದ ಅನುಭವ– ವ್ಯಕ್ತಿತ್ವ– ಆದರ್ಶಗಳನ್ನು ಅರ್ಥೈಸಿಕೊಂಡು ಅವನ್ನೆಲ್ಲ ತನ್ನದೆನ್ನುವಂತೆ ಅನುಭವಿಸಿ ಆಕಾರ ಕೊಡಲು ಹೊರಟಾಗ ಅದೊಂದು ದೊಡ್ಡ

6 "ಬರಹಗಾರನ ಬದುಕು" (೧೯೭೦) ಪು. ೩೦

ಸಾಹಸವೆನಿಸುತ್ತದೆ. ಆದರೆ ಈ ಕೃತಿ ತನ್ನದೇ ಆದ ಸೀಮಿತ ಉದ್ದೇಶ ಮತ್ತು ವ್ಯಾಪ್ತಿಯನ್ನು ಹೊಂದಿರುವುದರಿಂದ ಅಂಥ ಸಾಹಸವಾಗಿ, ಜವಾಬ್ದಾರಿಯಾಗಿ ಕಾಣಿಸಿಕೊಳ್ಳುವುದಿಲ್ಲ.

ಈ ಕೃತಿ ಗಾಂಧಿಜೀಯವರ ಸಮಗ್ರ ಚರಿತ್ರೆಯನ್ನೊಳಗೊಂಡಿರದೆ ದಕ್ಷಿಣ ಆಫ್ರಿಕೆಯಲ್ಲಿ ಅವರು ನಡೆಸಿದ ಹೋರಾಟದವರೆಗಿನ ಚರಿತ್ರೆಯನ್ನು ಮಾತ್ರ ಹೊಂದಿದೆ. ಗಾಂಧೀಜಿಯವರ ತತ್ವ-ದರ್ಶನಗಳು ಪರಿಸ್ಫುಟಗೊಂಡುದು, ಸತ್ಯಾಗ್ರಹ-ಉಪವಾಸ- ಬ್ರಹ್ಮಚರ್ಯಾದಿ ತತ್ವಗಳು ರೂಪಗೊಂಡಿರುವುದು ದಕ್ಷಿಣ ಆಫ್ರಿಕೆಯಲ್ಲಿ; ಅಲ್ಲದೆ ಮುಂದಿನ ಅವರ ಹೋರಾಟದ ಬದುಕಿಗೆ ದಕ್ಷಿಣ ಆಫ್ರಿಕಾದ ಹಿನ್ನೆಲೆಯೇ ಇರುವದರಿಂದ, ದಕ್ಷಿಣ ಆಫ್ರಿಕಾದ ಹೋರಾಟದವರೆಗಿನ ಚರಿತ್ರೆಯನ್ನು ಮಾತ್ರ ಒಳಗೊಂಡಿದ್ದರೂ ಈ ಕೃತಿ ಅವರ ವ್ಯಕ್ತಿತ್ವವನ್ನು ಅನುಭವಕ್ಕೆ ತಂದುಕೊಡುವಲ್ಲಿ ತನ್ನ ಮಹತ್ವವನ್ನು ಉಳಿಸಿಕೊಳ್ಳುತ್ತದೆ.

ಗಾಂಧೀಜಿಯವರ ಬಾಲ್ಯದ ಪರಿಸರ, ಮಾನವ ಸಹಜವಾದ ಮನೋದೌರ್ಬಲ್ಯದಿಂದ ವಿಷಯಾಸಕ್ತಿಗೆ ಒಳಗಾಗಿ ಅದರಿಂದ ಎದ್ದು ಹೊರಬರಲು ಮಾಡಿದ ದೃಢಸಂಕಲ್ಪ, ಅಭ್ಯಾಸಕ್ಕಾಗಿ ಇಂಗ್ಲಂಡಿಗೆ ಹೋದಾಗಿನ ಅಸಹ್ಯ ಅನುಭವ, ದಕ್ಷಿಣ ಆಫ್ರಿಕಾದಲ್ಲಿ ಪಟ್ಟ ನರಕ ಸದೃಶವಾದ ಅವಮಾನ ಹಿಂಸೆ, ಅಲ್ಲಿಯ ಭಾರತೀಯರ ಶೋಷಣೆ, ಅವರ ಮೇಲೆ ಪ್ರಭಾವ ಬೀರಿದ ವ್ಯಕ್ತಿಗಳು, ಗ್ರಂಥಗಳು ಮತ್ತು ಅವರ ತತ್ವಾದರ್ಶ ರೂಪಗೊಂಡ ರೀತಿ ಇವೆಲ್ಲವುಗಳನ್ನು ಸಾಕಷ್ಟು ಮಾರ್ಮಿಕವಾಗಿ, ಹೃದಯಸ್ಪರ್ಶಿಯಾಗಿ ನಿರೂಪಿಸುವಲ್ಲಿ ಅ.ನ.ಕೃ. ಅವರ ಸರಳಶೈಲಿ, ಭಾವಪೂರ್ಣ ಬರವಣಿಗೆ ಕೃತಿಗೆ ಸಾರ್ಥಕತೆಯನ್ನು ತಂದುಕೊಟ್ಟಿವೆ. ಗಾಂಧೀಜಿಯವರ ಬದುಕಿನ ಘಟನೆಗಳೇ ಸ್ವತಃ ರೋಮಾಂಚನಕಾರಿಯಾಗಿರುವದರಿಂದ ಹೆಚ್ಚು ಅನುಕೂಲವೂ ಆಗಿದೆ. ದಕ್ಷಿಣ ಆಫ್ರಿಕೆಯಲ್ಲಿಯ ಭಾರತೀಯರ ಜೀವನದ ಹಿನ್ನೆಲಿ ಅವರ ಬದುಕನ್ನು ಹಾಗೂ ಗಾಂಧೀಜಿಯವರ ಹೋರಾಟದ ಸ್ವರೂಪವನ್ನು ಅರ್ಥಮಾಡಿಕೊಳ್ಳುವಲ್ಲಿ ಹೆಚ್ಚು ಸಹಾಯಕವಾಗಿದೆಯೇನೋ ನಿಜ; ಆದರೆ ಅಷ್ಟೇ ಅನಿವಾರ್ಯವಾದ ದಕ್ಷಿಣ ಆಫ್ರಿಕೆಯ ಪ್ರಾದೇಶಿಕ ಪರಿಚಯವನ್ನು,

ಮೂಲನಿವಾಸಿಗಳ– ಬೋಯರರ– ಬಿಳಿಯರ ಪರಿಚಯುವನ್ನು ಮತ್ತು ಗಾಂಧೀಜಿಯವರ ಮೇಲೆ ಪ್ರಭಾವ ಬೀರಿದ ಟಾಲಸ್ಟಾಯ್, ಗೋಖಲೆ ಯಂಥವರ ಪರಿಚಯುವನ್ನು ಮಾಡಿಕೊಡದಿರುವದು ಮರೆಯಲಾಗದ ಕೊರತೆಯೆನಿಸುತ್ತದೆ. ಅದರಂತೆ ಕೇವಲ ಬಾಪುವಿನ ಜೀವನದ ಬಾಹ್ಯರೇಖೆ ಗಳಿಂದಲೇ ಅವರ ವ್ಯಕ್ತಿತ್ವದ ಬಹಿರ್ಮುಖದ ಕಲ್ಪನೆಯನ್ನು ಮಾಡಿ ಕೊಡುವ ಪ್ರಯತ್ನ ಕಂಡುಬರುವಂತೆ ಅವರು ಸಾಧಕರಾಗಿ ಅನುಭವಿಸಿದ ಮಾನಸಿಕ ತೊಳಲಾಟ–ಹೊಯ್ದಾಟಗಳಿಗೆ, ಅಂತರ್ಮುಖತ್ವಕ್ಕೆ ಸ್ಪಂದಿಸುವ ಗೋಜಿಗೆ ಹೋದಂತೆ ಕಂಡುಬರುವದಿಲ್ಲ. ಇಂಥ ಕೊರತೆಗಳ ಮಧ್ಯದಲ್ಲೂ, ೯೨ ಪುಟಗಳ ಸೀಮಿತ ಅವಕಾಶದಲ್ಲಿಯೂ ಈ ಕೃತಿ ತನ್ನ ಉದ್ದೇಶವನ್ನು ಈಡೇರಿಸಿಕೊಳ್ಳುವಲ್ಲಿ ಸಫಲಗೊಳ್ಳುತ್ತಿದೆ.

"ದೀನಬಂಧು ಕಬೀರ" ಅ.ನ.ಕೃಷ್ಣರಾಯರ ರಾಷ್ಟ್ರೀಯಪ್ರಜ್ಞೆಗೆ ನಿದರ್ಶನವಾಗಿ ಸುದೀರ್ಘಕಾಲದ ಪರಿಶ್ರಮದ ಫಲವಾಗಿ ಮೂಡಿಬಂದ ಕೃತಿ; ರಾಷ್ಟ್ರೀಯ ಭಾವೈಕ್ಯತೆಗೆ ಇಂಥ ಕೃತಿಗಳ ಅಗತ್ಯವನ್ನು ಅರ್ಥಮಾಡಿ ಕೊಂಡುದರ ಒಂದು ಜೀವಂತ ನಿದರ್ಶನ. ಹಿಂದೂ–ಮುಸ್ಲೀಮರ ಕೋಮು ವಾರ ಭಾವನೆಯಿಂದ ಭಾರತವು ತನ್ನ ಕಣ್ಣು ಮುಂದೆಯೇ ಜರ್ಜರಿತವಾಗಿ ಹೋಗುತ್ತಿರುವದನ್ನು ಕಂಡು ಕಳವಳಿಸಿದ ಲೇಖಕರು, ಭಕ್ತಿಮಾರ್ಗದಿಂದ ಹಿಂದೂ–ಮುಸ್ಲೀಮರಲ್ಲಿ ಸಾಮರಸ್ಯವನ್ನು ಸಾಧಿಸಿದ ಕಬೀರನ ಜೀವನ, ವ್ಯಕ್ತಿತ್ವ, ವಿಶಾಲಮನೋಭಾವನೆಯನ್ನು ಭಾರತೀಯರಲ್ಲಿ ಬಿಂಬಿಸುವ ಉದ್ದೇಶವನ್ನು ಹೊಂದಿರುವದು ಗಮನಾರ್ಹವಾಗಿದೆ.[7] ಈ ಕೃತಿಯ ಪ್ರೇರಣೆಯ ಮೂಲ ಸೆಲೆಯನ್ನೂ ಇಲ್ಲಿಯೇ ಗುರುತಿಸಬಹುದಾಗಿದೆ. ನಿಜವಾದ ಚರಿತ್ರೆಯಲ್ಲಿ ಪವಾಡಗಳಲ್ಲಿ ಮುಳುಗಿ ಪುರಾಣ ಪುರುಷನಾಗಿ ಕಾಣಿಸಿಕೊಳ್ಳುವ ಕಬೀರನಂಥ ಮಹಾತ್ಮರ ಜನನ, ಕಾಲ, ಮತ, ಮದುವೆ, ಸಂಸಾರದಂಥ ವಿಷಯಗಳು ಇತಿಹಾಸಕಾರನಿಗೆ ಒಂದು ಸವಾಲಾಗಿ ನಿಂತಾಗ ಅಂಥವರನ್ನು ಕುರಿತು ಜೀವನ ಚರಿತ್ರೆಯನ್ನು ಬರೆಯುವದು ಒಂದು ದೊಡ್ಡ ಆಹ್ವಾನವೆನಿಸುತ್ತದೆ. ಅಂತೆಯೇ ಅ.ನ.ಕೃ. ಅವರು ಆತನನನ್ನು ಕುರಿತು

7 ನೋಡಿರಿ– ನನ್ನನ್ನು ನಾನೇ ಕಂಡೆ (೧೯೪೪) ಪು. ೩೧

ಜೀವನ ಚರಿತ್ರೆಯನ್ನು ಬರೆಯಲು ೧೯೨೯ ರಲ್ಲಿ ಮಾಡಿದ ಸಂಕಲ್ಪ ೧೯೫೮ ರಲ್ಲಿ ಕಾರ್ಯರೂಪಕ್ಕೆ ಬರುವಂತಾಯಿತು. ಕಬೀರನ ಬಗ್ಗೆ ದೊರೆತ ಐತಿಹಾಸಿಕ ಸಂಗತಿಗಳನ್ನು ಆಧರಿಸಿ ವ್ಯಕ್ತಿಚರಿತ್ರೆ ಬರೆಯುವದು ದುಸ್ಸಾಧ್ಯ ವಾದರೂ ತಮ್ಮ ಪರಿಶ್ರಮದ ಮಿತಿಯಲ್ಲಿಯೇ ದೊರೆತ ಚಾರಿತ್ರಿಕ ಅಂಶಗಳ ಹಿನ್ನೆಲೆಯಲ್ಲಿ ಅವನ ಉಜ್ವಲ ಜೀವನ–ತತ್ವ–ವ್ಯಕ್ತಿತ್ವವನ್ನು ಭಾವಪೂರ್ಣ ವಾಗಿ ಬಿಂಬಿಸಲು ಪ್ರಯತ್ನಿಸಿರುವುದನ್ನು ಕಾಣಬಹುದಾಗಿದೆ. ಇತಿಹಾಸಕ್ಕೆ ಸಿಲುಕದ ವಿಷಯಗಳನ್ನು ಆತನ 'ದೋಹೆ'ಗಳಿಂದ ಕಂಡುಕೊಳ್ಳಲು ಯತ್ನಿಸಲಾಗಿದೆ. ಒಟ್ಟು ವಿಷಯದ ಕೊರತೆಯನ್ನು ತುಂಬಿಕೊಳ್ಳಲು ಪುಟಗಟ್ಟಲೇ 'ದೋಹೆ'ಗಳ ಭಾವಾನುವಾದವನ್ನು ಉದ್ಧರಿಸುತ್ತ ಹೋಗಿರು ವದೂ ಕಂಡು ಬರುತ್ತದೆ.

ಮಕ್ಕಳಿಲ್ಲದ ಮುಸಲ್ಮಾನ ನೇಕಾರರಾದ ನೀರೂ ಮತ್ತು ನೀಮಾ ದಂಪತಿಗಳಿಗೆ ದೊರೆತ ಅನಾಥ ಮಗುವಾಗಿ, ಲೋಕದ ವಕ್ರನೋಟಕ್ಕೆ ತುತ್ತಾಗಿ, ಖಾಜಿಯಿಂದ ಪ್ರಾಣಾಪಾಯಕ್ಕೆ ಗುರಿಯಾದ ಮತ್ತು ಕುಶಾಗ್ರ ಬುದ್ಧಿಯ ತಾರ್ಕಿಕಶಕ್ತಿಯ ರಮಾನಂದರ ಶಿಷ್ಯನಾಗಿ ತನ್ನ ಸ್ವಂತ ದರ್ಶನ ವನ್ನು ಬೆಳೆಸಿಕೊಂಡು ಉಪದೇಶಕನಾದ, ಅಲ್ಲದೆ ಎಲ್ಲಕ್ಕೂ ಮಿಗಿಲಾಗಿ ಭಕ್ತಿ ಮಾರ್ಗದಿಂದ ಹಿಂದೂ–ಮುಸ್ಲೀಮರಲ್ಲಿ ಸಾಮರಸ್ಯವನ್ನು ಬೆಳೆಸಿದ ರೋಮಾಂಚನಕಾರಿಯಾದ ಕಬೀರನ ಜೀವನವನ್ನು ಮನೋಜ್ಞವಾಗಿ ಚಿತ್ರಿಸಲಾಗಿದೆ. ಕೆಲವು ಸಂದರ್ಭ– ಘಟನೆಗಳು ಮೆಲಕು ಹಾಕುವಷ್ಟು ಪರಿಣಾಮಕಾರಿಯಾಗಿವೆ. ಸುನ್ನಾ ಮಾಡಲು ಬಂದ ಖಾಜಿಗೆ ಕಬೀರ "ಸುನ್ನಾ ಆಗಬೇಕೆಂದು ದೇವರಿಚ್ಛೆಯಾಗಿದ್ದರೆ ನಾನೇಕೆ ಸುನ್ನಾ ಮಾಡಿಸಿ ಕೊಂಡೇ ಹುಟ್ಟಲಿಲ್ಲ; ಸುನ್ನಾ ಮಾಡಿಸಿಕೊಂಡವರೇ ಮುಸಲ್ಮಾನರಾದರೆ ಹೆಂಗಸರ ಬಗ್ಗೆ ಏನು ಹೇಳುವೇ ?........ ಆದ್ದರಿಂದ ಪುಸ್ತಕ ಪಾಂಡಿತ್ಯ ಬಿಟ್ಟು ಪೂಜೆ ಮಾಡು" ಎಂದು ಹೇಳಿರುವದು ಅವುಗಳಲ್ಲಿ ಒಂದು.

ಆದರೆ ಲೇಖಕರಲ್ಲಿ ಈ ಕೃತಿಯನ್ನು ಬರೆಯಲು ಆರಂಭಿಸುವ ಪೂರ್ವ ದಲ್ಲಿ ಇದ್ದ ತಾಳ್ಮೆ ಬರೆಯುವ ಕಾಲಕ್ಕೆ ಕಂಡು ಬರುವುದಿಲ್ಲ. ಬಹುಕಾಲ ದಿಂದ ಮನಸ್ಸಿನಲ್ಲಿದ್ದ ಹೊರೆಯನ್ನು ಹೊರಹಾಕುವ ಅವಸರ ಎದ್ದು ಹೊಡೆ ಯುತ್ತದೆ. ಅತ್ಯಂತ ಸಾಮಾನ್ಯವಾದ ವಿಷಯ, ಘಟನೆ–ಸಂದರ್ಭಗಳಿಗೂ

ಅನವಶ್ಯಕವಾಗಿ ಪ್ರತ್ಯೇಕ ಅಧ್ಯಾಯಗಳನ್ನು ಮಾಡುವುದರಲ್ಲಿ ಔಚಿತ್ಯ ಕಂಡುಬರುವದಿಲ್ಲ. ಗೋಸ್ವಾಮಿ, ಅಷ್ಪಾನಂದ, ರಮಾನಂದರ ಪರಿಚಯು ವನ್ನು ಪ್ರತ್ಯೇಕ ಅಧ್ಯಾಯಗಳಲ್ಲಿ ಮಾಡಿಕೊಡುವದೂ ಅಷ್ಟೇ ಅಸ್ವಾರಸ್ಯ. ಇಂಥ ವಿಷಯಗಳು ನಾಯಕನ ಜೀವನದೊಂದಿಗೆ ಸಮರಸಗೊಂಡು ಮುನ್ನ ಡೆದಷ್ಟು ಸ್ವಾರಸ್ಯ ಅಧಿಕಗೊಳ್ಳುವ ಸಾಧ್ಯತೆ ಇರುತ್ತದೆ; ಸಮಕಾಲೀನ ಧಾರ್ಮಿಕ, ಸಾಮಾಜಿಕ, ರಾಜಕೀಯ ಹಿನ್ನೆಲೆಗಳು ಪ್ರತ್ಯೇಕ ಅಧ್ಯಾಯ ಗಳಾಗದೆ ಚರಿತ್ರೆಯಲ್ಲಿ ಪಾಕಗೊಂಡು ಬಂದರೆ ಜೀವನ ಚರಿತ್ರೆಗೆ ಹೆಚ್ಚಿನ ಅಮಲು ಬರುತ್ತದೆ. ಆದರೆ ವಿಷಯ ಸಂಯೋಜನೆಯಲ್ಲಿ ಅನವಶ್ಯಕ ಸೂತ್ರಕ್ಕೆ ಅಂಟಿಕೊಂಡಿರುವದರಿಂದ ನೆಯ್ಗೆಯಲ್ಲಿ ಬಿಗುವಾಗಲಿ, ಸೊಗ ಸಾಗಲಿ ಕಾಣದೊರೆಯುವುದಿಲ್ಲ. ಪವಾಡಗಳಿಂದ ಬಚಾವ್ ಆಗುವದು ಸಾಧ್ಯವಾಗಿಲ್ಲ. ಕಬೀರನ ಸಾವಿನ ಸಂದರ್ಭದಲ್ಲಿ ಬಾಗಿಲು ತೆಗೆದಾಗ ಗುಡಿಸಲಿನಲ್ಲಿ ಕಬೀರನಿರಲಿಲ್ಲ; ಹೂವಿನ ಹಾಸಿಗೆಯಿತ್ತು ಎಂಬಂಥವುಗಳನ್ನು ನಿದರ್ಶನಕ್ಕಾಗಿ ನೆನೆಯಬಹುದು. ಕೃತಿಯುದ್ದಕ್ಕೂ ಬರುವ ಅತ್ಯುಕ್ತಿ ಅದರ ಗಾಂಭೀರ್ಯವನ್ನು ಛಿದ್ರಗೊಳಿಸುತ್ತದೆ. ಕಾಡಿನಲ್ಲಿ ತಿರುಗಾಡುತ್ತಿ ರಲು ಬಳಲಿದ ಕಬೀರನಿಗೆ ಪ್ರಕೃತಿಯೇ ಉಪಚರಿಸಿತು. "ಮನದುಮ್ಮಳ ಕಂಡು ವನದೊಳಗಣ ಗಿಡಮರಗಳು, ಪಶುಪಕ್ಷಿಗಳು ಕಣ್ಣೀರು ಸುರಿಸಿದವು" ಎಂಬಂಥ ಅತಿರಂಜಿತ ವರ್ಣನೆಗಳಂತೂ ಪುರಾಣಕಾವ್ಯಗಳನ್ನು ನೆನಪಿಗೆ ತರುತ್ತವೆ. ಇಂಥ ದೌರ್ಬಲ್ಯಗಳಿಂದ ಈ ಕೃತಿಯ ಸ್ಥಿತಿ ಶಾಲಾಮಕ್ಕಳ ಪಠ್ಯಪುಸ್ತಕದ ಮಟ್ಟಕ್ಕೆ ಬಂದು ನಿಲ್ಲುತ್ತದೆ

"ಬರಹಗಾರನ ಬದುಕು" ನಾಡಿನ ಪರಿಸರದೊಂದಿಗೆ ಸ್ಪಂದಿಸುತ್ತ ಬರಹಗಾರನಾಗಿಯೇ ಬದುಕಿ ಬಾಳಿದ ಅ ನ ಕೃ. ರಾಯರ ಜೀವನದ ಸವಿ ನೆನಪುಗಳ ಒಂದು ಆತ್ಮಕಥೆ. ಒಬ್ಬ ವ್ಯಕ್ತಿ ತನ್ನ ಗತಬಾಳಿನ ಅನುಭವ ಗಳನ್ನು ಮೆಲಕು ಹಾಕಿದಾಗ, ನೆನಪಿನ ಪಾತಳಿಯಿಂದ ತೇಲಿಬರುವ ಅವುಗಳ ಪದರುಗಳು ತಮ್ಮ ಪ್ರತ್ಯೇಕನಾದ ಹೊಗರನ್ನು ಕಳೆದುಕೊಂಡು ರಸಾನು ಭವದ ಸ್ವಾರಸ್ಯವನ್ನು ಒದಗಿಸುವ ಕಾರಣ ಲೇಖಕರು ಈ ಕೃತಿಗೆ 'ಸವಿನೆನಪು' ಎಂದೂ ಕರೆದಿರುವದು ಅರ್ಥಪೂರ್ಣವಾಗಿದೆ. ಒಂದು ಅರ್ಥದಲ್ಲಿ ಅದು ಕೃತಿಗಿರುವ ಮಿತಿಗಳನ್ನು ಸ್ಪಷ್ಟವಾಗಿ ನಿರ್ದೇಶಿಸುವಂತಿದೆ.

ಒಂದು ಐತಿಹಾಸಿಕ ಮಹತ್ವದ ಕಾಲದಲ್ಲಿ ಹುಟ್ಟಿ ತನ್ನ ಆಸಕ್ತಿಯನ್ನು ವಿಕಾಸಗೊಳಿಸುತ್ತ, ತನ್ನ ನಾಡಿನ ಹಿತಚಿಂತಕನಾಗಿ ಕಳಕಳಿಯಿಂದ ಚಡಪಡಿಸುವ ಚೇತನವಾಗಿ ತನ್ನ ಪರಿಸರದುದ್ದಕ್ಕೂ ಗಾಳಿಯಂತೆ ಪಸರಿಸಿದ ಅ.ನ. ಕೃಷ್ಣರಾಯರಂಥ ಸತ್ವಗಳು, ಆ ಪರಿಸರದ ಒಂದು ಅವಿಭಾಜ್ಯ ಅಂಗವಾಗಿಯೇ ಬಿಡುವದು ತೀರ ಸಹಜ; ಇದರಿಂದಾಗಿ ಆ ಚೇತನಗಳ ಆತ್ಮಕಥೆ ಆ ಒಟ್ಟು ಪರಿಸರದ ಕಥೆಯಾಗಿ ಐತಿಹಾಸಿಕಮೌಲ್ಯವನ್ನು ಹೊಂದುತ್ತದೆ. ಅಂತೆಯೇ ಆತ್ಮಕಥೆಯನ್ನು ಬರೆದು ಕನ್ನಡನಾಡಿನ ಸರ್ವೋದಯದ ಬಗ್ಗೆ ತಮಗೆ ಗೊತ್ತಿದ್ದ ಸಂಗತಿಗಳನ್ನು ಬೆಳಕಿಗೆ ತರಬೇಕೆಂದು ೧೯೬೭ ರಲ್ಲಿ ಅವರ ಅಭಿಮಾನಿ ಮಿತ್ರರು ಮಾಡಿದ ಸೂಚನೆಯ ಪರಿಣಾಮ ಈ "ಸವಿ ನೆನಪು"ಗಳ ಸರಮಾಲೆ ೧೯೬೮ ರಲ್ಲಿ 'ಕನ್ನಡ ಪ್ರಭ' ದಲ್ಲಿ ಧಾರಾವಾಹಿಯಾಗಿ ಪ್ರಕಟವಾಯಿತು; ಅದುವೇ ಮುಂದೆ ೧೯೭೨ ರಲ್ಲಿ ಅವರ ಪ್ರಥಮ ಪುಣ್ಯತಿಥಿಯಂದು ಸ್ವತಂತ್ರ ಗ್ರಂಥವಾಗಿ "ಬರಹಗಾರನ ಬದುಕು" ಎಂಬ ಶಿರೋನಾಮದೊಂದಿಗೆ ಓದುಗರ ಕೈ ಸೇರಿತು. ಆದರಿಂದಾಗಿ ೧೯೪೪ ರಲ್ಲಿಯ ಅವರ ಸಂಕಲ್ಪ[೪] ಬಹುಕಾಲದ ನಂತರವಾದರೂ ಚಿಂತೆಯಿಲ್ಲ ಕಾರ್ಯರೂಪಕ್ಕೆ ಬಂದಂತಾಯಿತು. ಆದರೆ ಅವರು ಮಾಡಬೇಕೆಂದಿದ್ದ ಮಾರ್ಪಾಟುಗಳು ಸೇರ್ಪಡಿಸಬೇಕೆಂದಿದ್ದ ಹೊಸ ವಿಷಯಗಳು ಹಾಗೆಯೇ ಉಳಿದಿವೆ. ಹೀಗೆ ಅನಿವಾರ್ಯವಾಗಿ ಒಂದು ಅಪೂರ್ಣ ಗ್ರಂಥವಾಗಿರುವದರಿಂದ ಓದುಗರ ಔದಾರ್ಯವೂ ಅಪೇಕ್ಷಣೀಯವೆನಿಸುತ್ತದೆ. ಈ ಕೃತಿಗೆ ಪೂರ್ಣತೆಯನ್ನು ಕೊಡುವ ಪ್ರಯತ್ನವಾಗಿ ಅನುಬಂಧವೆನ್ನುವಂತೆ ಅವರ ಧರ್ಮಪತ್ನಿಯವರಾದ ಶ್ರೀಮತಿ ವಸಂತಾದೇವಿಯವರ ಬರಹವೂ ಸೇರಿಕೊಂಡಿದೆ.

ಈ ಕೃತಿಯ ಆರಂಭದಲ್ಲಿ "ನನ್ನ ನಾಡಿನ ಇತಿಹಾಸದ ಮಹತ್ವದ ಕಾಲದಲ್ಲಿ ಹುಟ್ಟಿದ್ದು ನನ್ನ ಪುಣ್ಯ. ಈ ಇತಿಹಾಸದ ಮಹತ್ವದ ಘಟನೆಗಳು ಇಂದಿನವರಿಗಲ್ಲದೆ ಮುಂದಿನ ಪೀಳಿಗೆಯವರಿಗೂ ಪ್ರಯೋಜನವಾಗಬಹುದೆಂದು ಈ ಸವಿನೆನಪಿನ ಲೇಖನದಲ್ಲಿ ಉದ್ಯುಕ್ತನಾಗಿದ್ದೇನೆ." ಎಂದು

---

೪ ನೋಡಿರಿ- 'ನನ್ನನ್ನು ನಾನೇ ಕಂಡೆ' (೧೯೪೪) ಪು- ೫೬

ಮುನ್ನುಡಿಯಲ್ಲಿ ಅ.ನ.ಕೃ. ಅವರು ಹೇಳಿರುವದು ಅವರ ಮಹತ್ವಾಕಾಂಕ್ಷಿ ತನವನ್ನು ಮಾತ್ರವಲ್ಲ ಈ ಕೃತಿಯು ಹಿಂದಿದ್ದ ಧೋರಣೆಯ ಮಹತ್ವವನ್ನೂ ಮನಗಾಣಿಸಿ ಕೊಡುತ್ತದೆ. ಇಂಥ ಮಹತ್ವಾಕಾಂಕ್ಷಿ ಲೇಖಕರಾಗಿ ತಾವು ಕಂಡ ಅಂದಿನ ಪರಿಸರದ ಪದರುಗಳನ್ನು ಪ್ರದರ್ಶಿಸುವ ಉದ್ದೇಶ ಹೊಂದಿದ್ದ ರಿಂದಲೇ ತಮ್ಮ ಖಾಸಗಿ ಜೀವನದ ಆಗುಹೋಗುಗಳನ್ನು ತೋಡಿಕೊಳ್ಳುವ ಗೋಜಿಗೆ ಹೋಗದೆ, ಒಬ್ಬ ಲೇಖಕರಾಗಿ, ತಮ್ಮ ಬದುಕಿನ ಪರಿಧಿಯಲ್ಲಿ ಒದಗಿದ ಸಂಕೀರ್ಣ ಅನುಭವ ಹಾಗೂ ಅದರ ಪರಿಣಾಮ ಪ್ರತಿಕ್ರಿಯೆಗಳನ್ನು ಆತ್ಮೀಯವಾಗಿ ಕಳಕಳಿಯಿಂದ ವಿವರಿಸುವುದರ ಕಡೆಗೆ ಗಮನ ಹರಿಸಿದ್ದಾರೆ. ಅದಕ್ಕೆ ಪೂರಕವಾಗಿ ಅವರ ಮನೆತನದ ಚರಿತ್ರೆಯೂ ಉಚಿತವಾಗಿ ಸೇರಿ ಕೊಂಡಿದೆ. ತಮ್ಮ ಬದುಕು ಹಾಗೂ ವ್ಯಕ್ತಿತ್ವಕ್ಕೆ ಪೋಷಕಾಂಶಗಳನ್ನು ಒದಗಿಸಿ ಅದಕ್ಕೆತಕ್ಕ ತಿರುವನ್ನು ಕೊಟ್ಟು, ಕಲೆ ಹಾಗೂ ಸಂಸ್ಕೃತಿಯ ಒಗ್ಗ ಆಸಕ್ತಿಯನ್ನು ಕೆರಳಿಸಿದ, ಪ್ರತಿಭೆಯನ್ನು ಪ್ರಚೋದಿಸಿದ ಶಾಲಾಜೀವನದ ಅನುಭವ ಹೇಳಿಕೊಂಡಿದ್ದಾರೆ; ಈ ಸಂದರ್ಭದಲ್ಲಿ ಶಿಕ್ಷಕರ ಪ್ರೌಢಿಮೆ, ಕಳಕಳಿ ಯಂಥ ಮೌಲ್ಯಗಳು ಅನಿವಾರ್ಯವೆಂಬಂತೆ ಕಾಣಿಸಿಕೊಂಡಿವೆ. ಕಲೆಯ ಬೇರೆಬೇರೆ ಕ್ಷೇತ್ರಗಳ ಸ್ವರೂಪ ಹಾಗೂ ಪರಂಪರೆಯ ಹಿನ್ನೆಲೆಯಲ್ಲಿ, ಆಯಾ ಕ್ಷೇತ್ರಗಳ ಕಲಾವಿದರ ಬದುಕು– ಸಾಧನೆಯನ್ನು, ಅವರ ಸೇವೆಯ ಫಲ ಗಳನ್ನು ವಿಮರ್ಶಿಸಿ ಬೆಲೆಕಟ್ಟುವ ಪ್ರಯತ್ನ ಮಾಡಲಾಗಿದೆ. ಪತ್ರಿಕಾಕರ್ತ ರಾಗಿ, ವಾಗ್ಮಿಯಾಗಿ ಕ್ರಿಯಾಶೀಲರಾದ ರಾಯರ ಅನುಭವವನ್ನು ಹಾಗೂ ಅವರ ನಿಕಟ ಸಂಪರ್ಕಕ್ಕೆ ಬಂದ ಮಹತ್ವದ ವ್ಯಕ್ತಿಗಳ ಪರಿಚಯವನ್ನು ಈ ಕೃತಿ ಪಡೆದುಕೊಂಡಿದೆ.

ಅ.ನ.ಕೃ. ಅವರ ಇಂಥ ವಿಶಿಷ್ಟ ಧೋರಣೆಯಿಂದಾಗಿ ವರದಾಚಾರ್ಯ, ಗರುಡ, ಮಹಮ್ಮದ ಫೀರ, ಹಂದಿಗನೂರ ಸಿದ್ಧರಾಮಪ್ಪ, ಬಸವರಾಜ ಮನ್ಸೂರ, ಗುಬ್ಬಿ ವೀರಣ್ಣರಂಥ ರಂಗಕಲಾವಿದರ, ಖಾನಅಬ್ದುಲ್ ಕರೀಂ ಖಾನ, ಮಲ್ಲಿಕಾರ್ಜುನ ಮನ್ಸೂರ, ಕೃಷ್ಣಪ್ಪ. ಚೌಡಯ್ಯ ದೇವೇಂದ್ರಪ್ಪ ಕನಕಲಕ್ಷ್ಮಿಯವರಂಥ ಉತ್ತರಾದಿ ಹಾಗೂ ದಕ್ಷಿಣಾದಿ ಪರಂಪರೆಯ ಸಂಗೀತ ವಿದ್ವಾಂಸರ, ವೆಂಕಟಪ್ಪ, ಮಿಣಜಗಿ, ಕಮಡೊಳ್ಳಿ, ಶಿಲ್ಪಿಸಿದ್ಧಾಂತಿ ಸಿದ್ಧಲಿಂಗಸ್ವಾಮಿಗಳ ಮತ್ತು ಧಾರವಾಡದ ಮೃತ್ಯುಂಜಯ ಸ್ವಾಮಿಗಳ,

ನವಿಲುಗುಂದದ ಶಿವಕುಮಾರಸ್ವಾಮಿಗಳ, ಜ. ಚ. ನಿ. ಮಲ್ಲಾಡಿಹಳ್ಳಿ ರಾಘವೇಂದ್ರಸ್ವಾಮಿಗಳಂಥ ಮಠಾಧೀಶರ, ಸ್ವಾಮಿ–ಸತ್ಪುರುಷರ ಹಾಗೂ ಇನ್ನೂ ಅದೆಷ್ಟೋ ವಾದ್ಯಕಾರರ ನರ್ತಕರ ಸಾಹಿತಿಗಳ ವ್ಯಕ್ತಿತ್ವದ ವಿವಿಧ ಮುಖಗಳ ಸಜೀವ ಮೂರ್ತಿಗಳನ್ನು ಈ ಕೃತಿ ಒಳಗೊಂಡಿದೆ. ಇಂಥ ವ್ಯಕ್ತಿ ಚಿತ್ರಣಗಳ ಸರಮಾಲೆಯಾಗಿ ಈ ಕೃತಿ ಲವಲವಿಕೆಯನ್ನುಂಟು ಮಾಡುವಲ್ಲಿ ಓದುಗರ ಪ್ರಜ್ಞೆಯ ಪದರುಗಳನ್ನು ಹೆಚ್ಚಿಸುವಲ್ಲಿ ಸಾರ್ಥಕಗೊಳ್ಳುತ್ತದೆ. ಅಷ್ಟೇ ಅಲ್ಲ ಜೀವನಯಾತ್ರೆ, ಉದಯರಾಗ, ಮಂಗಳಸೂತ್ರ, ಶನಿಸಂತಾನ, ನಗ್ನಸತ್ಯ: ಸಾಹಿತ್ಯ ಮತ್ತು ಕಾಮಪ್ರಚೋದನೆಯಂಥ ತಮ್ಮ ಕೃತಿಗಳ ರಚನೆಯ ಹಿನ್ನೆಲೆ, ಪ್ರೇರಣೆ, ಸ್ವರೂಪ ಹಾಗೂ ಉದ್ದೇಶಗಳನ್ನು ಸೂಚಿಸಿರುವದರಿಂದ ಆ ಕೃತಿಗಳ ಅಧ್ಯಯನಕ್ಕೆ ಉಪಯುಕ್ತ ಹಿನ್ನೆಲೆಯನ್ನು ಒದಗಿಸುತ್ತದೆ. ಆದರೆ ಇಂಥ ಧೋರಣೆಯನ್ನೊಳಗೊಂಡ ವಿಷಯ ವಿವರಣೆಗಳು "ಕನ್ನಡ ಕುಲರಸಿಕರು", "ಕನ್ನಡ ಕಲಾವಿದರು" ನನ್ನನ್ನು ನಾನೇ ಕಂಡೆ"— ಈ ಎಲ್ಲ ಕೃತಿಗಳಲ್ಲಿ, ಇನ್ನಿತರ ಲೇಖನಗಳಲ್ಲಿ ದೊರೆಯುವದರಿಂದ ಪುನರಾವೃತ್ತಿಯೇ ಕಾಣಿಸಿಕೊಂಡು ಕೃತಿ ತನ್ನ ತಾಜಾತನವನ್ನು ಕಳೆದುಕೊಳ್ಳುತ್ತದೆ.

ಆತ್ಮಕಥೆಗಾರ ತನ್ನ ವರ್ತಮಾನದ ಅವಸ್ಥೆ- ಅಂತಸ್ತಿನಿಂದ ಮುಕ್ತನಾಗಿ ತನ್ನ ಗತಕಾಲದ ನೆನಹಿನಾಳಕ್ಕೆ ಇಳಿದು, ಕಳೆದ ಬಾಳನ್ನು ಸಂವೇದನಾಶೀಲನಾಗಿ ಅನುಭವಿಸಬೇಕಾಗುತ್ತದೆ. ಪ್ರಾಮಾಣಿಕವಾಗಿ ಮನಸ್ಸನ್ನು ಬಿಚ್ಚಿಕೊಳ್ಳುತ್ತ ಇಂಬಾಗಿ ಬೆಳೆದು ಹಗುರಾಗಿ ಸ್ಪಂದಿಸುತ್ತ ಮೇಲೆದ್ದು ಬರಬೇಕಾಗುತ್ತದೆ. ಹೀಗೆ ತನ್ನ ಬಾಳಿನ ಅನುಭವದ ದ್ರವ್ಯಗಳನ್ನು ಪ್ರಾಮಾಣಿಕವಾಗಿ ಶೋಧಿಸಿ ಅವುಗಳನ್ನು ಕಲಾತ್ಮಕವಾಗಿ ಸಂಯೋಜಿಸಿ ಮೂರ್ತಗೊಳಿಸಿದಾಗ ಅದೊಂದು ಸಾಹಿತ್ಯಿಕ ಸ್ವಾರಸ್ಯವನ್ನು ಕೊಡಬಲ್ಲ ಉತ್ಕೃಷ್ಟ ಕೃತಿಯಾಗುವ ಸಾಧ್ಯತೆ ಇರುತ್ತದೆ. ಆದರೆ ಇಂಥ ಅಂಶಗಳತ್ತ ಕಾಳಜಿಯನ್ನು ವಹಿಸದ ರಾಯರು, ವರ್ತಮಾನದ ತಮ್ಮ ಅಂತಸ್ತಿಗೆ ಗಟ್ಟಿಯಾಗಿ ಅಂಟಿಕೊಂಡು, ವಯೋವೃದ್ಧನಾದ ಯಜಮಾನನೊಬ್ಬ ತನ್ನ ಅಭಿಮಾನಿಗಳೆದುರು ತನ್ನ ಗತಕಾಲದ ಅನುಭವವನ್ನು ಹೆಮ್ಮೆಯಿಂದ ಹೇಳಿಕೊಳ್ಳುವಂತೆ ತಮ್ಮ ಅನುಭವದ ಸುರುಳಿಯನ್ನು ಬಿಚ್ಚುತ್ತ ಹೋಗು

ತ್ತಾರೆ. ಇದರಿಂದ ಆತ್ಮ ನಿರೀಕ್ಷೆ-ಪರೀಕ್ಷೆಗಳಿಗೆ ಇರಬೇಕಾದ ಅವಕಾಶ ತಪ್ಪಿ ನಿವೇದಿಸಿಕೊಳ್ಳುವದಕ್ಕಿಂತ ಪ್ರದರ್ಶಿಸಿಕೊಳ್ಳುವ ಪ್ರವೃತ್ತಿಯೇ ಬಹಳಷ್ಟು ಸಲ ಒಡೆದು ಕಾಣುತ್ತದೆ. ಕೆಲವು ಸಂದರ್ಭದಲ್ಲಿಯಂತೂ ಅನವಶ್ಯಕ ವಿಷ ಯಕ್ಕೆ ಅತಿಯಾದ ಪ್ರಾಧಾನ್ಯವನ್ನು ಕೊಟ್ಟು ಪುಟಗಟ್ಟಲೇ ವಿವರಿಸುತ್ತ ಹೋಗಿರುವದು ಕೃತಿಯು ಶೈಥಿಲ್ಯಕ್ಕೆ ಕಾರಣವಾಗಿದೆ. ಅ.ನ.ಕೃ. ಅವರ ಗೆಳೆಯ ರಾಮಾಚಾರ್ಯರ ಹಾಗೂ ತಮ್ಮ ಸಂಬಂಧ, ತಾಯಿಯ ಪ್ರೀತಿ ಮೊದಲಾದ ವಿವರಣೆ ಮತ್ತು ಅನಂತಶಾಸ್ತ್ರಿಗಳು, ಸಂಗೀತರತ್ನ ಕೆ. ವಾಸುದೇವಾಚಾರ್ಯರು ಕೂಡಿದಾಗ ನಡೆದ ಸಂಭಾಷಣೆ, ತಿಂಡಿ, ಪರಸ್ಪರ ಮೆಚ್ಚುಗೆಯ ಮಾತುಗಳು ಪುಟಗಟ್ಟಲೇ ಬೆಳದಿರುವುದನ್ನು ಇಲ್ಲಿ ನೆನೆಯ ಬಹುದು.

ಆತ್ಮಚರಿತ್ರೆ ಎಂಬ ದೃಷ್ಟಿಯಿಂದ ದೋಷಗಳೇನೇ ಇರಲಿ, ಒಂದು ಕಾಲದ ಅತ್ಯಂತ ಮಹತ್ವದ ಗದ್ಯಲೇಖಕರಾದ ಅ.ನ.ಕೃ. ಅವರ ಮತ್ತು ಅವರ ಸಮಕಾಲೀನ ಸಾಹಿತ್ಯದ ಅಭ್ಯಾಸಕ್ಕೆ ಆವಶ್ಯಕ ಅನುಕೂಲತೆಗಳನ್ನು ಒದಗಿಸುವ ಕಾರಣಕ್ಕಾಗಿ ಇದೊಂದು ಕನ್ನಡ ಸಾಹಿತ್ಯದ ಈ ಪ್ರಕಾರದ ಕೃತಿಗಳಲ್ಲಿ ತನ್ನ ಮಹತ್ವವನ್ನು ಉಳಿಸಿಕೊಳ್ಳುವ ಉಪಯುಕ್ತ ಗ್ರಂಥ ವಾಗಿದೆ; ಅಲ್ಲದೆ ಹಲವು ಹವ್ಯಾಸಗಳನ್ನು ಹಚ್ಚಿಕೊಂಡ ಸಾಹಸಿಯೊಬ್ಬನ ಸುದೀರ್ಘವಾದ ಜೀವನಯಾತ್ರೆಯ ಅನುಭವಗಳ ಸ್ವಾರಸ್ಯವನ್ನು ಈ ಕೃತಿ ಓದುಗರಿಗೆ ಒದಗಿಸಬಲ್ಲುದಾಗಿದೆ.

"ನನ್ನನ್ನು ನಾನೇ ಕಂಡೆ"– ಹೆಸರೇ ಸೂಚಿಸುವಂತೆ ಇದೊಂದು ಸ್ವಯಂಸಂದರ್ಶನವನ್ನೊಳಗೊಂಡ ಕೃತಿ. ಲೋಕವ್ಯಕ್ತಿಯಾದ ಅ.ನ.ಕೃಷ್ಣ ರಾಯರು ಪ್ರಜ್ಞಾವಂತ ಸಾಹಿತಿಯಾದ ಅ.ನ.ಕೃ. ಅವರನ್ನು ಸಂದರ್ಶಿಸಿ ಸಮಕಾಲೀನ ಸಾಹಿತ್ಯ, ಭಾಷೆ, ಸಮಾಜ, ರಾಜಕಾರಣ, ಶಿಕ್ಷಣ ಮೊದ ಲಾದವುಗಳ ಸ್ವರೂಪ ಹಾಗೂ ಸಮಸ್ಯೆಗಳ ಬಗ್ಗೆ ಅವರ ಭಾವನಾತ್ಮಕ ಮತ್ತು ವೈಚಾರಿಕ ಪ್ರತಿಕ್ರಿಯೆಗಳನ್ನು ಪ್ರಕಟಿಸುವ ಈ ತಂತ್ರ ಆಕರ್ಷಕವೂ ಅರ್ಥಪೂರ್ಣವೂ ಆಗಿದೆ. ಪತ್ರಿಕಾ ವ್ಯವಸಾಯದ ಜೊತೆಗೆ ಬೆಳೆದು ಬಂದ ಈ ತಂತ್ರ ಇಂದು ಹೊಸದಲ್ಲವಾದರೂ, ತಮ್ಮ ಜೀವನ ಮತ್ತು ಸಮ ಕಾಲೀನ ಸಮಸ್ಯೆಗಳ ಬಗೆಯನ್ನು ಜನತೆಗೆ ಅರ್ಪಿಸುವಲ್ಲಿ ಈ ತಂತ್ರವಾಧ್ಯ

ಮದ ಮಹತ್ವವನ್ನು ಮನದಂದು ಔಚಿತ್ಯಮಯವಾಗಿ ಬಳಸಿಕೊಂಡಿರುವದು:— ಪತ್ರಿಕಾ ವ್ಯವಸಾಯದಲ್ಲಿ ಪಳಗಿದ್ದ ರಾಯರ ಬುದ್ಧಿವಂತಿಕೆಯ ನಿದರ್ಶನವಾಗಿದೆ. ಅ.ನ.ಕೃ. ಅವರು ಪರಿವಿಡಿಯಲ್ಲಿ ಸೂಚಿಸಿದಂತೆ ಇದನ್ನು ಆತ್ಮಕಥೆಗಳ ಆತ್ಮಚರಿತ್ರೆಗಳ ಪಂಕ್ತಿಯಲ್ಲಿ ಸೇರಿಸಬಹುದಾದರೆ, ಆತ್ಮಕಥೆಯ ದೃಷ್ಟಿಯಿಂದ ಈ ತಂತ್ರ ಅಪರೂಪದ್ದಾಗಿಯೂ ಕಾಣುತ್ತದೆ. ಹೀಗೆ ಆತ್ಮಚರಿತ್ರೆಯ ಒಂದು ಪ್ರಭೇದವಾಗಿ ಕಾಣಿಸಿಕೊಳ್ಳುವ ಈ ಕೃತಿ ಅ.ನ.ಕೃ. ಅವರ ವ್ಯಕ್ತಿತ್ವದ ವಿಶಿಷ್ಟ ಮುಖಗಳನ್ನು, ಅವರ ಜೀವನ ಪ್ರವೃತ್ತಿಯನ್ನು "ಬರಹಗಾರನ ಬದುಕಿ"ಗಿಂತಲೂ ಒಂದು ಕೈ ಮಿಗಿಲಾಗಿ ಸಾಕ್ಷಾತ್ಕರಿಸಿ ಕೊಡುತ್ತದೆ. ಇಲ್ಲಿ ಬಂದ ಎಷ್ಟೋ ವಿಷಯ, ಘಟನೆ, ಸಂದರ್ಭ, ಸನ್ನಿವೇಶಗಳ ಉಲ್ಲೇಖ ಅಲ್ಲಿ ಕೂಡ ಬಂದಿದ್ದರೂ, ತರುಣ ಬಂಡಾಯಕೋರನಾಗಿ ಪ್ರತಿಕ್ರಿಯಿಸುವ ಇಲ್ಲಿಯ ರೀತಿಗೂ, ಅರವತ್ತು ವರುಷದ ಮಾಗಿದ ಜೀವಿಯಾಗಿ ಪ್ರತಿಕ್ರಿಯಿಸುವ ಅಲ್ಲಿಯ ರೀತಿಗೂ ಇರುವ ಅಂತರದ ಅರಿವಾಗಿ ಒಟ್ಟು ಅವರ ವ್ಯಕ್ತಿತ್ವದ, ಸ್ವಭಾವದ ಬೆಳವಣಿಗೆ ಕಲ್ಪನೆಗೆ ಬರುತ್ತದೆ.

"ಕೋಣೆಯನ್ನುವದಕ್ಕಿಂತ ಹಳೆಯ ಸಾಮಾನಿನ ಹರಾಜು ಅಂಗಡಿ, ಕೋಣೆಯ ತುಂಬ ಸಿಗರೇಟು, ಒಟ್ಟಿದ ಪುಸ್ತಕ....ಸಿಗರೇಟ ಧೂಳಿ ತುಂಬಿದ ಗ್ಲಾಜಿನ ಪಾತ್ರೆ.... ಇದೊಂದು ಪುಸ್ತಕ ಪಿಶಾಚಿಯ ಗುಹೆ." ಅದರಲ್ಲಿ "ಅಕ್ಷೌರ ಮುಖದ, ದಗಲೆ ಪಾಯಿಜಾಮಿನ, ಕೆದರಿದ ತಲೆಗೂದಲಿನ ಕಾಡುಮನುಷ್ಯನಾಗಿ" ಅ.ನ.ಕೃ. ದರ್ಶನವೀಯುವ ಚಿತ್ರದಲ್ಲಿಯ ಸ್ವವಿಡಂಬನೆ ಹೆಚ್ಚು ನೈಜವೂ ಆಕರ್ಷಕವೂ ಆಗಿದೆ. ಅವರ ಜೀವನದ ಇಷ್ಟೊಂದು ನೈಜ ಚಿತ್ರ ಅವರ ಆತ್ಮಕಥೆಯಲ್ಲಿಯೂ ನೋಡದೊರೆಯುವದಿಲ್ಲ. ಸಮಕಾಲೀನ ಜೀವನ- ಸಮಸ್ಯೆಗಳ ಬಗೆಗೆ ಕಳಕಳಿಯುಳ್ಳ ಬುದ್ಧಿಜೀವಿಯಾಗಿ, ಬಂಡಾಯಕೋರ ಲೇಖಕನಾಗಿ, ಬಡಾಯಿಕೋರ ತರುಣನಾಗಿ ಓದುಗರ ಬಾಂಧವ್ಯವನ್ನು ಬೆಳೆಸಿಕೊಳ್ಳುವ ರೀತಿ ಹೆಚ್ಚು ಕಲಾತ್ಮಕವೆನಿಸುತ್ತದೆ. ತಮ್ಮನ್ನು ಸಿದ್ಧ—ಪ್ರಸಿದ್ಧ ಲೇಖಕರೆಂದು, ಮೂರು ಕಣ್ಣಿನ ರುದ್ರಮೂರ್ತಿಯೆಂದು, ಸವ್ಯಸಾಚಿಯೆಂದು, ಹಲವು ಹೋರಾಟಗಳ ಕಲಿಯೆಂದು ಕರೆದುಕೊಂಡಿದ್ದಾರೆ. "ಕರ್ನಾಟಕದ ಸರ್ವೋತ್ಕೃಷ್ಟ ಕಾದಂಬರಿಕಾರರು ನಿಮ್ಮ

ಅಭಿಪ್ರಾಯದಲ್ಲಿ ಯಾರು" ಎಂಬ ಪ್ರಶ್ನೆಗೆ "ಯಾರೇನು ? ನಾನೆ" ಎಂದು ಹೇಳಿಕೊಳ್ಳುವಷ್ಟು ಹಿರಿಯರಿಮೆ ಪ್ರಕಟವಾಗುತ್ತದೆ. "ಕಾವ್ಯ ಬರೆಯುವುದು ಸುಲಭ. ಆದಕ್ಕೆ ಎಲ್ಲರೂ ಪದ್ಯ ಬರೆಯಲು ಹೊರಡುತ್ತಾರೆ. ಗದ್ಯ ಕೆಟ್ಟರೆ ಪದ್ಯವಾಗುತ್ತದೆ; ವಿಚಾರದ ಅಭಾವ, ಕರ್ಮ ಕೌಶಲ್ಯದ ಕೊರತೆ. ಪ್ರಸಿದ್ಧಿಯ ತೀಕ್ಷ್ಣದಾಹ ಇವು ಪದ್ಯರಚನಾ ಬಾಹುಳ್ಯಕ್ಕೆ ಕಾರಣವೆಂಬಂಥ ವಿಕ್ಷಿಪ್ತ ಅಭಿಪ್ರಾಯವನ್ನೂ ವ್ಯಕ್ತಗೊಳಿಸಿದ್ದಾರೆ.

ಹಿಂದೀ ಸಮಸ್ಯೆ, ಪಾಕಿಸ್ತಾನ ಸಮಸ್ಯೆ, ಕೋಮುವಾರ ಸಮಸ್ಯೆ— ಇಂಥ ಮಹತ್ವದ ಜ್ವಲಂತ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವಲ್ಲಿ ವಿಫಲರಾದ, ಹೆಚ್ಚಿನ ಸಮಸ್ಯೆಗಳಿಗೆ ಕಾರಣರಾದ ಆಗಿನ ಕಾಲದ ಹಿರಿಯರಾದ ದಿವಾಕರರನ್ನು ಮೊದಲುಗೊಂಡು ಮಹಾತ್ಮಾಗಾಂಧಿಯವರವರೆಗಿನ ವ್ಯಕ್ತಿಗಳ ನೀತಿ–ವರ್ತನೆ–ವಿಚಾರಗಳನ್ನು ನಿದಾಕ್ಷಿಣ್ಯವಾಗಿ ನಿರ್ಭೀತಿಯಿಂದ ವಿಮರ್ಶಿಸುವ, ವಿಡಂಬಿಸುವ, ಪ್ರತಿಯೊಂದಕ್ಕೂ ಹಿರಿಯರ ಮೇಲೆ ಹರಿಹಾಯುವ ಪ್ರವೃತ್ತಿ ಕೃತಿಯುದ್ದಕ್ಕೂ ಮೆರೆಯುತ್ತ ಹೋಗಿದೆ. ಆದರೆ ತಮ್ಮ ಅಭಿಪ್ರಾಯದ ಸಮರ್ಥನೆಗೆ ಅನುಭವ, ವಿಚಾರ, ಚಿಂತನೆಗಳ ಗಟ್ಟಿಮುಟ್ಟಾದ ಆಧಾರಗಳನ್ನು ಒದಗಿಸಲು ಪ್ರಾಮಾಣಿಕವಾಗಿ ಯತ್ನಿಸಿರುವದರಿಂದ ಅವರ ವಾದಗಳು ಪಡಪೋಷಿ ಎನಿಸಿಕೊಳ್ಳುವದಿಲ್ಲ. ಕೋಮುವಾರ ಭಾವನೆಯಿಂದಾಗಿಯೇ ವ್ಯಾಪಾರ ಉದ್ಯಮದಲ್ಲಿ ಕನ್ನಡಿಗರು ಹಿಂದೆ ಬಿದ್ದು ಗುಜರಾತಿಗಳು, ಮಾರವಾಡಿಗಳು ಮುಂದಾಗಿರುವದರತ್ತ ಗಮನ ಸೆಳೆದಿದ್ದಾರೆ. ಪಲಾಯನವಾದಿಗಳಾದ ನಮ್ಮ ಕವಿಗಳು ನಿತ್ಯ ಜೀವನದತ್ತ ಗಮನ ಹರಿಸುವದಿಲ್ಲ; ಅವರ ಹೃದಯದಲ್ಲಿ ನೀಚತನ ಸುಲಿಗೆ ದಬ್ಬಾಳಿಕೆಗಳನ್ನೆದುರಿಸುವ ಅವ್ಯಾತಾಗ್ನಿಯಿಲ್ಲ ಎಂಬ ತಮ್ಮ ಆಕ್ಷೇಪಣೆಯನ್ನು ಮುಂದೆ ಮಾಡಿರುವರಲ್ಲದೆ ಪ್ರಗತಿಶೀಲ ಚಳುವಳಿಯ ಧೋರಣೆಗಳನ್ನೂ ಸ್ಪಷ್ಟಪಡಿಸಿದ್ದಾರೆ. ಸ್ವಾರ್ಥಕ್ಕಾಗಿ ಕೋಮುವಾರ ಭಾವನೆಯನ್ನು ಬೆಳೆಸುವ "ಆ ಮಹನೀಯರಿಗೆ ಇದೋ ನನ್ನ ಎಚ್ಚರಿಕೆ, ಸಾರ್ವಜನಿಕ ಜೀವನದಲ್ಲಿ ಈ ವಿಷ ಪ್ರಸಾರವನ್ನು ನಿಲ್ಲಿಸಿ, ಸಾಧ್ಯವಾಗದಿದ್ದರೆ ಸಾರ್ವಜನಿಕ ಜೀವನದಿಂದ ತೊಲಗಿ; ನೀವು ತೊಲಗದಿದ್ದರೆ ನಾವು ತೊಲಗಿಸುತ್ತೇವೆ" ಎಂದು ಉಗ್ಗಡಿಸುವಲ್ಲಿಯಂತೂ ರಾಯರು ಇಂದಿನ ಬಂಡಾಯ ಸಾಹಿತಿ

ಗಳನ್ನೂ ಮೀರಿಸುವಂತೆ ಕಂಡುಬರುತ್ತಾರೆ. ತಮ್ಮ "ಸಾಹಿತ್ಯರತ್ನ"ದ ಬಗ್ಗೆ ಅಂದಿನ ವಿಮರ್ಶಕರ ಅಭಿಪ್ರಾಯಕ್ಕೆ ತಮ್ಮ ಪ್ರತಿಕ್ರಿಯೆಯನ್ನು—ಅದು ಕೇವಲ ಆತ್ಮರಕ್ಷಣೆಯಾಗಿ, ಸ್ವಸಮರ್ಥನೆಯಾಗಿ ಕಾಣಿಸಿಕೊಂಡರೂ ಚಿಂತೆಯಿಲ್ಲ—ಕೊಟ್ಟಿರುವದು ಅಭ್ಯಾಸಿಗಳಿಗೆ ಹೆಚ್ಚು ಉಪಯುಕ್ತವೆನಿಸಿದೆ.

ಹೀಗೆ ತಮ್ಮ ಸಮಕಾಲೀನ ಪರಿಸರ ಹಾಗೂ ಅದರ ಸಮಸ್ಯೆಯಲ್ಲಿ ಮುಳುಗಿದ ರಾಯರ ಅಂತರಂಗ–ಬಹಿರಂಗವನ್ನೆಲ್ಲ ಗರ್ಭೀಕರಿಸಿಕೊಂಡಿರುವ ಈ ಕೃತಿ ಅವರ ಆತ್ಮಕಥೆಯಷ್ಟೇ ಪ್ರಯೋಜನಕಾರಿಯಾಗಿದೆ. ಅದರಲ್ಲೂ "ನಾನು ಕಾಣಲು ಬಂದದ್ದು ಒಬ್ಬ ಪಂಡಿತನನ್ನು; ಕಂಡದ್ದು ಒಬ್ಬ ಹುತಾತ್ಮನನ್ನು" ಎಂಬ ಸಂದರ್ಶಕರಾದ ಅ.ನ.ಕೃಷ್ಣರಾಯರ ಮಾತಂತೂ ಪರಿಸರದ ವಿಷಚಕ್ರದಲ್ಲಿ ಸಿಲುಕಿದ ಸಾಹಿತಿಯೊಬ್ಬನ ಬವಣೆಯನ್ನು ಪರಿಣಾಮಕಾರಿಯಾಗಿ ವ್ಯಂಜಿಸುತ್ತದೆ.

ಅ.ನ.ಕೃ. ಅವರ 'ಕನ್ನಡ ಕುಲರಸಿಕರು' ಮತ್ತು "ಕರ್ನಾಟಕ ಕಲಾವಿದರು" ಇಂಥದೇ ಸಾರ್ಥಕ ಧೋರಣೆಯನ್ನೊಳಗೊಂಡ ಆದರೆ ಹೆಚ್ಚು ಸಾರ್ಥಕವಾದ ಕೃತಿಗಳಾಗಿವೆ. ತಮ್ಮ ಸಮಕಾಲೀನರಾದ ಸುಮಾರು ೭೪ ಜನ ಸಾಹಿತಿ–ಕಲಾವಿದರ ವ್ಯಕ್ತಿಚಿತ್ರಣಗಳನ್ನುಳ್ಳ ಈ ಕೃತಿಗಳು, ಸಾಂಸ್ಕೃತಿಕ ವಾಗಿ ಅ.ನ.ಕೃ. ಅವರಿಗಿದ್ದ ಸಮಕಾಲೀನ ಪ್ರಜ್ಞೆಗೆ ಜ್ವಲಂತ ನಿದರ್ಶನ ವಾಗಿದೆ. ಇಂಥ ಸಮಕಾಲೀನ ವ್ಯಕ್ತಿಗಳ ಹಾಗೂ ಅವರ ಕೃತಿಗಳ ಪರಿಚಯದಿಂದ ವರ್ತಮಾನ ಹಾಗೂ ಮುಂದಿನ ಪೀಳಿಗೆಗೆ ಆಗಬಹುದಾದ ಪ್ರಯೋಜನವನ್ನು ಗಮನದಲ್ಲಿಟ್ಟುಕೊಂಡು ಸಾಹಿತಿ-ಕಲಾವಿದರ ವ್ಯಕ್ತಿ ಚಿತ್ರಣಗಳನ್ನು ಕೃತಿರೂಪದಲ್ಲಿ ಹೊರತಂದವರಲ್ಲಿ ರಾಯರೇ ಮೊದಲಿಗ ರಾಗಿ ತೋರುತ್ತಾರೆ. ತತ್ಪೂರ್ವದ ಜೀವನ ಚರಿತ್ರೆಕಾರರ ಕಾಳಜಿ ರಾಷ್ಟ್ರೀಯ, ಐತಿಹಾಸಿಕ ಪುರುಷರಿಗೆ ಇಲ್ಲವೆ ಮಹಿಳೆಯರಿಗೆ ಮಾತ್ರ ಸೀಮಿತ ವಾಗಿದ್ದಾಗ ಅ.ನ.ಕೃ. ಅವರು ತಮ್ಮ ಸಮಕಾಲೀನ ಹಿರಿಕಿರಿಯರ ಕಲಾ ವಿದರತ್ತ ಕಾಳಜಿಯನ್ನು ತೋರಿದ್ದು ಅತ್ಯಂತ ಮಹತ್ವದ್ದಾಗಿದೆ.

ವೃತ್ತಿ ಲೇಖಕರಾದ ಅ.ನ.ಕೃ. ಅವರ ಈ ಕೃತಿಗಳಿಗೆ ದೊರೆತ ಮಹತ್ವ ಕೇವಲ ಆಕಸ್ಮಿಕವಾದದ್ದೂ ಅಲ್ಲ; ಅಂದರೆ ಪತ್ರಿಕೆಗಳಿಗಾಗಿ ಬರೆ

ಯಲು ವಿಷಯಕ್ಕಾಗಿ ತಡಕಾಡಿದಾಗ ಅವರ ದೃಷ್ಟಿ ಆಕಸ್ಮಿಕವಾಗಿ ಕಲಾವಿದರತ್ತ ಹರಿದದ್ದಲ್ಲ. ಸ್ವತಃ ಒಬ್ಬ ಸಾಹಿತಿಯಾಗಿದ್ದ, ಸಂಸ್ಕೃತಿಯ ಸಂವರ್ಧನೆಯಲ್ಲಿ ಕಲಾವಿದರಿಗಿರುವ ಪಾತ್ರದ ಅರಿವುಳ್ಳ ಅ.ನ.ಕೃ. ಅವರ ಗಮನ ಉದ್ದೇಶಪೂರ್ವಕವಾಗಿಯೇ ಇತ್ತ ಹರಿದಿರುವದು ತೀರ ಸ್ವಾಭಾವಿಕ. ಇದಕ್ಕೆ "ಒಂದು ನಾಡಿನ ಸಮಗ್ರ ಇತಿಹಾಸದ ಕಲ್ಪನೆ ಬರಬೇಕಾದರೆ ಅದರ ಕಲಾವಿದರು, ಕವಿಗಳ ಪರಿಚಯವೂ ಆಗಬೇಕು........ ಭಾರತದ ಇತಿಹಾಸ ಕಟ್ಟಿರುವವರು ಅದರ ಋಷಿಗಳು, ಕಲಾವಿದರು"[9] ಎಂಬ ಅವರ ಮಾತು ಒಂದು ಪ್ರಾಮಾಣಿಕ ಸಾಕ್ಷಿಯನ್ನೊದಗಿಸುತ್ತದೆ. ಕನ್ನಡದ ಬಗೆಗೆ ಮತ್ತು ಅದಕ್ಕಾಗಿ ದುಡಿಯುತ್ತಿರುವ ಸಂಘ ಸಂಸ್ಥೆಗಳ ಬಗೆಗೆ ದಿವ್ಯ ಅತೃಪ್ತಿಯಿಂದ ಧಡಪಡಿಸುವ, ಆದೇಕಾರಣಕ್ಕಾಗಿ ವಿಕ್ಷಿಪ್ತ ವ್ಯಕ್ತಿಯಾಗಿ ಕಾಣಿಸಿಕೊಳ್ಳುವ ಕೃಷ್ಣರಾಯರಂಥ ಲೇಖಕರಿಗೆ ತಮ್ಮ ಸಮಕಾಲೀನ ವ್ಯಕ್ತಿಗಳೊಡನೆ ವೈಚಾರಿಕ ಭಿನ್ನಾಭಿಪ್ರಾಯ, ಮಾನಸಿಕ ಮುಸೆದಾಟ ಸಹಜವಾಗಿಯೇ ಇದ್ದಿರಬಹುದಾದರೂ ಅವರೆಲ್ಲರ ವ್ಯಕ್ತಿ ಚಿತ್ರಣಗಳಲ್ಲಿ ತೋರಿದ ಶ್ರದ್ಧೆ, ವಿಶಾಲ ಮನೋಭಾವನೆ ವಿಸ್ಮಯವನ್ನುಂಟು ಮಾಡುವಂತಿದೆ. "ಕನ್ನಡ ಕಲಾವಿದರು" ಬರೆದು ಪ್ರಕಟಿಸುವ ಮೊದಲಿನಿಂದಲೂ ಸಾಹಿತಿಗಳ ಮೇಲೆ ಬರೆಯಬೇಕೆಂದು ವಿಚಾರ ಮಾಡುತ್ತಲಿದ್ದೆ; ಆದರೆ ನಮ್ಮ ಸಾಹಿತ್ಯ ಪ್ರಪಂಚದಲ್ಲಿ ಮೂಡಿದ್ದ ಪಕ್ಷ-ಪ್ರತಿಪಕ್ಷ ಭಾವನೆಗಳು, ವ್ಯಕ್ತಿಪೂಜೆಯ ಮನೋಭಾವವೂ, ಸರಕಾರಿ ಅಧಿಕಾರಿಗಳಾದರೂ ಡಿಗ್ರಿ ಪಡೆಯದಿರುವವರನ್ನು ಸಾಹಿತಿಗಳೇ ಅಲ್ಲವೆಂದು ಕಡೆಗಣಿಸುವ ನೈಚ್ಯಾನುಸಂಧಾನವೂ ನನ್ನ ಕೆಲಸಕ್ಕೆ ಅಡ್ಡಿ ಬಂದವು."[10] ಎಂದು ಹೇಳಿದ ಮಾತುಗಳನ್ನು ಈ ಸಂದರ್ಭದಲ್ಲಿ ನೆನೆಯಬಹುದಾಗಿದೆ.

'ಕನ್ನಡ ಕುಲರಸಿಕರು' ಹಾಗೂ "ಕರ್ನಾಟಕ ಕಲಾವಿದರು' ಒಂದೇ ವರ್ಗಕ್ಕೆ ಸೇರಿದ ಕೃತಿಗಳು. ಆದರೆ ಅವು ಹೊಂದಿದ ಉದ್ದೇಶದ ಸ್ವರೂಪ ಮತ್ತು ಮಿತಿಗಳು ಬೇರೆ ಬೇರೆ. ಕನ್ನಡ ಕುಲರಸಿಕರು ಗ್ರಂಥದಲ್ಲಿ ವ್ಯಕ್ತಿ

---

9 "ಕನ್ನಡ ಕುಲರಸಿಕರು" (೧೯೫೧) ಮುನ್ನುಡಿ. ಪು.-V

10 ಅಲ್ಲೇ.

ಗಳು ಪರಿಚಯವನ್ನು ಪ್ರಧಾನವಾಗಿಟ್ಟುಕೊಂಡು ವಿಮರ್ಶೆಯನ್ನು ಗೌಣ ವಾಗಿಟ್ಟುಕೊಂಡಿದ್ದರೆ ಕರ್ನಾಟಕ ಕಲಾವಿದರು ಗ್ರಂಥದಲ್ಲಿ ಪರಿಚಯವನ್ನು ಗೌಣವಾಗಿಟ್ಟುಕೊಂಡು ವಿಮರ್ಶೆಯನ್ನು ಪ್ರಧಾನವಾಗಿಟ್ಟುಕೊಳ್ಳಲಾಗಿದೆ.

'ಕನ್ನಡ ಕುಲರಸಿಕರು' ಗ್ರಂಥದಲ್ಲಿ ಆಲೂರ ವೆಂಕಟರಾಯ, ಮಾಸ್ತಿ, ಗೋವಿಂದ ಪೈ, ಎ.ಆರ್.ಕೃ, ಹಳಕಟ್ಟಿ, ಬಸವನಾಳ, ನಂದೀಮಠ ಮೊದ ಲಾದ ಒಟ್ಟು ಮೂವತ್ತೆರಡು ರಸಿಕರ ಪರಿಚಯವನ್ನು ಮಾಡಿಕೊಡಲಾಗಿದೆ. ಇವುಗಳಲ್ಲಿ 'ನವೋದಯ' ಪತ್ರಿಕೆಯ ವಿಶೇಷ ಸಂಚಿಕೆಯಲ್ಲಿ ೧೯೪೫ ರಲ್ಲಿ ಪ್ರಕಟವಾದ 'ಅಣ್ಣ ಮಾಸ್ತಿಯವರು' ಎಂಬ ಲೇಖನದೊಂದಿಗೆ 'ಪ್ರಜಾಮತ' ದಲ್ಲಿ ಲೇಖನ ಮಾಲೆಯಾಗಿ ಪ್ರಕಟಗೊಂಡ ೨೬ ಜನ ಸಾಹಿತಿಗಳ ಪರಿಚ ಯವೂ ಸೇರಿಕೊಂಡಿದೆ. ಇವೆಲ್ಲ ಮುಖ್ಯವಾಗಿ ಪತ್ರಿಕೆಗಳಿಗಾಗಿ ಬರೆದ ಲೇಖನಗಳಾಗಿರುವದರಿಂದ ಅನಿವಾರ್ಯವಾಗಿ ಕೆಲವು ಇತಿಮಿತಿಗಳನ್ನು ಹೊಂದಿದಂತೆ ದೌರ್ಬಲ್ಯಗಳನ್ನು ಹೊಂದಿವೆ. ಕೆಲವು ವ್ಯಕ್ತಿಗಳ ಪರಿಚಯ ವಂತೂ ಕೇವಲ ಔಪಚಾರಿಕವಾಗಿವೆ. ಇವಕ್ಕೆ ವ್ಯಕ್ತಿ ಚಿತ್ರಣ ಎನ್ನುವುದ ಕ್ಕಿಂತ ವ್ಯಕ್ತಿ ಪರಿಚಯವೆನ್ನುವದು ಹೆಚ್ಚು ಸೂಕ್ತ.

ಮಾಸ್ತಿ ವೆಂಕಟೇಶ ಅಯ್ಯಂಗಾರ, ಬಿ. ಶಿವಮೂರ್ತಿ ಶಾಸ್ತ್ರಿಗಳಂಥ ನಿಕಟಸಂಬಂಧವುಳ್ಳ ಕೆಲವು ವ್ಯಕ್ತಿಗಳ ಹೊರ-ಒಳಗುಗಳನ್ನು, ವ್ಯಕ್ತಿತ್ವದ ಒಳಪದರುಗಳನ್ನು ಆತ್ಮೀಯವಾಗಿ ಚಿತ್ರಿಸುವಲ್ಲಿ ತೋರಿದ ಕೌಶಲ ಮನ ಸ್ಸನ್ನು ತುಂಬುತ್ತದೆ. ಭಾವಾವೇಶಕ್ಕಾಗಲಿ, ಪೂರ್ವಗ್ರಹಕ್ಕಾಗಲಿ ಒಳ ಗಾಗದೆ ಗುಣ–ಸ್ವಭಾವ ವಿವರಣೆಯಲ್ಲಿ, ಭಾಷೆಯ ಬಳಕೆಯಲ್ಲಿ— ಎಲ್ಲದರ ಲ್ಲಿಯೂ ಸಾಕಷ್ಟು ಸಂಯಮವನ್ನು ತೋರಿದ್ದರಿಂದ ವ್ಯಕ್ತಿತ್ವದ ನೈಜ ಅನುಭವವಾಗುತ್ತದೆ. ವ್ಯಕ್ತಿತ್ವದ ಬಾಹ್ಯಸ್ವರೂಪವನ್ನು ಬಿಂಬಿಸುವಾಗ ಲಂತೂ ಭಾವ ಚಿತ್ರದ ಅನುಭವವಾಗುತ್ತದೆ. ಮಾಸ್ತಿಯವರ ಬಗ್ಗೆ ಹೇಳುತ್ತ : ಮಾಸ್ತಿಯವರ ಮುಖಚರ್ಯೆಯಲ್ಲಿ ಪ್ರಕಟವಾಗುವದು ಅವರ ಸರಳ ನಿಷ್ಕಲ್ಮಷ ಸ್ಮಿತವದನ. ಮಾಸ್ತಿಯವರ ಹಾಗೆ ನಗಬಲ್ಲವರು ವಿರಳ. ಬಾಪುವಿನ ನಗೆ ಕಂಡಿದ್ದವರಿಗೆ ಗೊತ್ತು, ನಗೆಯ ಅಮಾನುಷ ಲೀಲಾ

ವಿಲಾಸ. ಮಾಸ್ತಿಯವರದು ತುಟಿಯಂಚಿನ ನಗೆಯಲ್ಲ. ಅದು ಹೃದಯದಿಂದ ತುಂಬಿ ಬರುತ್ತದೆ. ಈ ಜೀವನ ಮನಸ್ಸು ಪರಿಶುದ್ಧವೆಂದು ಅವರ ನಗೆ ಸಾರಿ ಹೇಳುತ್ತದೆ. "ಸಂಯಮ ಮಾಸ್ತಿಯವರ ಜೀವನದ ನಂದಾದೀಪ" ಅಚ್ಚುಕಟ್ಟಾದ ನಾಲ್ಕು ಮಾತುಗಳಲ್ಲಿ ಪ್ರಕಟಗೊಳ್ಳುವ ರಾಯರ ಈ ಚಿತ್ರಕ ಶಕ್ತಿ— ಮನಸ್ಸು ಮಾಡಿದರೆ ಅವರು ಅದೆಂಥ ಉತ್ಕೃಷ್ಟ ಮಾದರಿಯ ವ್ಯಕ್ತಿ ಚಿತ್ರಣಗಳನ್ನು ಕೊಡಬಲ್ಲವರಾಗಿದ್ದರು ಎಂಬುದಕ್ಕೆ ಒಂದು ವಿಶ್ವಾಸಾರ್ಹ ವಾದ ನಿದರ್ಶನವಾಗಿದೆ. ಇಂಥ ಕೆಲವು ಲೇಖನಗಳಲ್ಲಿ ಅಪೂರ್ವ ಕಲಾವಂತಿಕೆ ಯನ್ನು ಪ್ರದರ್ಶಿಸಿ ಲವಲವಿಕೆಯನ್ನು ಮೂಡಿಸುವ ಲೇಖಕರು ಉಳಿದವು ಗಳ ಬಗ್ಗೆ ಇಟ್ಟುಕೊಂಡ ಭರವಸೆಯನ್ನು ಹುಸಿಗೊಳಿಸಿಬಿಡುತ್ತಾರೆ. ಒಟ್ಟಿ ನಲ್ಲಿ ಆಂತರಿಕ ಒತ್ತಾಸೆಯಿಂದ ಮೂಡಿ ಬಂದಾಗ ಸ್ವತ್ವಯುತವಾಗಿ, ಪತ್ರಿಕೆಗಳ ಒತ್ತಾಯದಿಂದ ಮೂಡಿಬಂದಾಗ ಸಪ್ಪೆಯಾಗಿ ಇಲ್ಲಿಯ ಬರವಣಿಗೆ ಗಳು ಕಾಣಿಸಿಕೊಳ್ಳುತ್ತವೆ.

"ಕರ್ನಾಟಕ ಕಲಾವಿದರು"— ಸಂಗೀತ, ನೃತ್ಯ, ಅಭಿನಯ, ಮೊದ ಲಾದ ಕಲೆಯ ವಿಭಿನ್ನ ಕ್ಷೇತ್ರಕ್ಕೆ ಸಂಬಂಧಿಸಿದ ಒಟ್ಟು ೪೨ ಕಲಾವಿದರ ಪ್ರತಿಭೆ, ಸಾಧನೆಗಳ ಹಾಗೂ ಗುಣದೋಷಗಳ ಸೈದ್ಧಾಂತಿಕ ವಿಮರ್ಶೆಯ- ನ್ನೊಳಗೊಂಡ ಅತ್ಯಂತ ಮಹತ್ವದ ಕೃತಿ; ಅ.ನ.ಕೃ. ಅವರ ಬಹುಮುಖ ಆಸಕ್ತಿಗೆ, ಬಹುಶ್ರುತತ್ವಕ್ಕೆ, ಕಲಾಪ್ರಜ್ಞೆಗೆ, ಕಲಾವಿದರ ಬಗ್ಗೆ ಇದ್ದ ಅಭಿ ಮಾನಕ್ಕೆ ಹಾಗೂ ವಿಮರ್ಶಾಶಕ್ತಿಗೆ ಒಂದು ಉಜ್ವಲ ನಿದರ್ಶನವಾಗಿ, ಸುದೀರ್ಘಕಾಲ ಬಾಳಬಲ್ಲ ಆಧಾರ ಗ್ರಂಥವಾಗಿದೆ.

ಈ ಕೃತಿ ಒಟ್ಟು ಎರಡು ಸಂಪುಟಗಳಲ್ಲಿ ಪ್ರಕಟವಾಗಿದೆ. ೧೯೪೬ ರಲ್ಲಿ ಪ್ರಕಟವಾದ ಮೊದಲ ಸಂಪುಟದಲ್ಲಿ ೧೬ ಕಲಾವಿದರ, ೧೯೫೨ ರಲ್ಲಿ ಪ್ರಕಟ ವಾದ ಎರಡನೆಯ ಸಂಪುಟದಲ್ಲಿ ೨೬ ಜನ ಕಲಾವಿದರ ಹಾಗೂ ಕಲೆಯ ಪರಿಚಯವಿದೆ.

ಚಿತ್ರಕಲಾವಿದರಲ್ಲಿ ಮಿಣಜಿಗಿಯವರ ಹಾಗೂ ಎಲವಟ್ಟಿಯವರ ಚಿತ್ರ ಕಲೆಯ ಸ್ವಾರಸ್ಯ–ವೈಶಿಷ್ಟ್ಯವನ್ನು ವಿವರಿಸುವಲ್ಲಿ ವಿಮರ್ಶಿಸುವಲ್ಲಿ ಅ.ನ.ಕೃ.

ಅವರು ಹೆಚ್ಚಿನ ಆಸಕ್ತಿ, ಅಸಾಮಾನ್ಯ ಜವಾಬ್ದಾರಿಯನ್ನು ತೋರಿದ್ದಾರೆ. ಸಂಗೀತ ಮತ್ತು ಚಿತ್ರಕಲೆಗಳ ಸಮನ್ವಯವಾದ ದೃಶ್ಯ ಸಂಗೀತ (Visualised Music) ಎನಿಸಿದ ರಾಗಮಾಲಾ ಚಿತ್ರಗಳಲ್ಲಿ ಅವರು ತೋರಿದ ಪ್ರತಿಭೆಯನ್ನು ವೈಶಿಷ್ಟ್ಯವನ್ನು ಸೈದ್ಧಾಂತಿಕವಾಗಿ ಎತ್ತಿತೋರಿಸಿದ್ದಾರೆ. ರಾಗಮಾಲಾ ಸಂಪ್ರದಾಯ ರಜಪೂತ ಚಿತ್ರಕಲೆಯಿಂದ ಆರಂಭವಾಗಿದೆ; ಪಹರಿ ಚಿತ್ರಗಾರರು ಇದುವರೆಗೆ ಎರಡು ಶತಮಾನಗಳ ಕಾಲ ರಾಗ-ರಾಗಿಣಿಯ ಚಿತ್ರಗಳನ್ನು ರಚಿಸುವಲ್ಲಿ ಸೋಲೊಪ್ಪಿದಾಗ ಆ ಸಂಪ್ರದಾಯದ ಕೀರ್ತಿಯನ್ನು ಬೆಳಸಿದ ಭಾಗ್ಯ ಮಿಣಜಿಗಿಯವರದು ಎಂಬುದನ್ನು ಅವರ ಮಾಲಕಂಸ, ತೋಡಿ, ಮೇಘಮಲ್ಹಾರ ಮೊದಲಾದ ಹೃದಯಸ್ಪರ್ಶೀ ಚಿತ್ರಗಳ ಸೂಕ್ಷ್ಮ ವಿಶ್ಲೇಷಣೆಯಿಂದ ಪ್ರತಿಪಾದಿಸಿದ್ದಾರೆ. ಈ ಪರಂಪರೆಯಲ್ಲಿ ಅವರ ವೈಶಿಷ್ಟ್ಯವನ್ನು ಮನಗಾಣಿಸಿಕೊಡಲಾಗಿದೆ. ಮಿಣಜಿಗಿಯವರ ಚಿತ್ರಗಳಲ್ಲಿ ವ್ಯಕ್ತಿಗಳಷ್ಟೇ ನಿಸರ್ಗವೂ ಸಚೇತನವಾಗಿರುವದನ್ನು, ಪ್ರಕೃತಿಯ ರುದ್ರ-ಭೀಷಣವನ್ನು ಚಿತ್ರಿಸುವಂತೆ ಲೀಲಾವಿಲಾಸವನ್ನು ಚಿತ್ರಿಸಿರುವದನ್ನು, ಭಾರತೀಯ ಕಲೆಗಳ ಅನಂತ ವಾಹಿನಿಗಳಲ್ಲಿ ಕೆಲವನ್ನು ಸಮನ್ವಯಗೊಳಿಸಿ ಸಾಧಿಸಿರುವ ಕಲಾಪಾಕವನ್ನೂ ಅ.ನ.ಕೃ. ಅವರ ಪ್ರಜ್ಞೆ ಗುರುತಿಸಿದೆ

ಭಾರತೀಯರ ಕಾವ್ಯದಲ್ಲಿ ಪ್ರಕೃತಿಗೆ ದೊರೆತಿರುವ ಸ್ಥಾನ ಚಿತ್ರಕಲೆಯಲ್ಲಿ ದೊರೆಯದಿರುವ ಸೋಜಿಗದತ್ತ ಓದುಗರ ಗಮನವನ್ನು ಹರಿಸಿ, ಪ್ರಕೃತಿ ಸೌಂದರ್ಯವನ್ನು ವರ್ಣಮಾಧ್ಯಮದಲ್ಲಿ ಸೆರೆಹಿಡಿಯುವ ಎಲವಟ್ಟಿಯವರ ಪರಿಣತಿಯನ್ನು, ಬೆರಗುಗೊಳಿಸುವ ವರ್ಣ ಸಂಯೋಜನೆ ಮತ್ತು ಸಂವಿಧಾನ ಕೌಶಲವನ್ನು ಮನವರಿಕೆ ಮಾಡಿಕೊಟ್ಟಿದ್ದಾರೆ. ಎಲವಟ್ಟಿಯವರ 'ವಿಶ್ರಾಂತಿ' ಚಿತ್ರದಲ್ಲಿ ಮೂರ್ತಿಭವಿಸಿದ ದಿವ್ಯ ಶಾಂತಿಯ ಹಿಂದೆ ಕ್ರಾಂತಿ ಹೊಗೆಯಾಡುತ್ತಿರುವದನ್ನು ತೋರಿಸುವದರ ಮೂಲಕ ಅವರ ಸಾಮಾಜಿಕ ಪ್ರಜ್ಞೆಯತ್ತ ಓದುಗರ ಗಮನವನ್ನು ಸೆಳೆಯಲಾಗಿದೆ.

ಸಂಗೀತಗಾರರ ವಿಶಿಷ್ಟ ಪ್ರತಿಭೆಯನ್ನು ಎತ್ತಿ ತೋರಿಸುತ್ತ ನೀಲಮ್ಮ ಕಡಾಂಬಿಯವರ ಸಂಗೀತದಲ್ಲಿ ಕಾಣುವ ಭಾವ-ತಂತ್ರಗಳ ಮಧುರ ಮೈತ್ರಿ

ಯನ್ನು, ಸಾಹಿತ್ಯ-ಸಂಗೀತ ಸಂಯೋಗ ಮಾಡಿ ಕಲಾಪಾಕವನ್ನಿಳಿಸುವ ಅಪೂರ್ವ ಸಿದ್ಧಿಯನ್ನು ಅವರ ವೈಶಿಷ್ಟ್ಯಗಳನ್ನಾಗಿ ಗುರುತಿಸಿದ್ದಾರೆ.

ಬಿ.ವಿ ಯವರು— ನಮ್ಮ ದೇವರ ನಾಮಗಳಿಗೆ ಇಷ್ಟಾನುಸಾರ ರಾಗ ತಾಳಗಳನ್ನು ಜೋಡಿಸಿ ಮಟ್ಟು ಹಾಕುವದನ್ನು ಬಿಟ್ಟು ಒಂದು ಸ್ಥಿರರೂಪ ವನ್ನು ಕೊಡಬೇಕು ಎಂದು ಅಭಿಪ್ರಾಯ ಪಟ್ಟಾಗ, ಅ.ನ.ಕೃ. ಅವರು— ಒಂದು ಭಾವ ರಸವನ್ನು ಉದ್ರೇಕಿಸುವ ಹಲವು ರಾಗಗಳು ರಾಗಮಾಲೆ ಯಲ್ಲಿ ದೊರೆಯುವಾಗ ಕಲಾವಿದರು ಅವುಗಳನ್ನೇಕೆ ಬಳಸಿಕೊಳ್ಳ ಬಾರದು? ಇದರಿಂದ ಹಾಡುವವನಿಗೆ ಸ್ವಾತಂತ್ರ್ಯ. ಕೀರ್ತನೆಗಳಿಗೆ ವಿವಿಧ ಕಳೆ ಎಂದು ಹೇಳಿ ಮರುವಿಮರ್ಶೆ ಮಾಡಿದ್ದು ಸೈ ಎನಿಸಿಕೊಳ್ಳುವಂತಿದೆ.

"ವಚನ ಸಂಗೀತ ಬೆಳವಣಿಗೆಗೆ ಅಡ್ಡಿಬರುವ ಯಾರಾದರೂ ನಾಡಿನ ಸಂಸ್ಕೃತಿಯ ಸಂವರ್ಧನೆಗೆ ಕೊಡಲಿ ಪೆಟ್ಟು ಕೊಡುತ್ತಿದ್ದಾರೆಂಬುದನ್ನು ಮರೆಯಬಾರದು" ಎಂದು ಎಚ್ಚರಿಕೆಯನ್ನು ಕೊಟ್ಟಿದ್ದಾರೆ. ಅಲ್ಲದೆ ಶರಣರ ವಚನಗಳನ್ನು ಭಾವಾರ್ಥ ಕೆಡದಂತೆ ಸಂಗೀತಕ್ಕೆ ಅಳವಡಿಸಲು ಅನುಬಂಧ ದಲ್ಲಿ ಸಲಹೆಯನ್ನು ಕೊಡಲಾಗಿದೆ. ವಚನಗಳನ್ನು ಕರ್ನಾಟಕ ಸಂಗೀತಕ್ಕೆ ಅಳವಡಿಸಿದ ವಿದ್ವಾನ್ ಚಕ್ರಕೋಡಿ ನಾರಾಯಣ ಶಾಸ್ತ್ರಿಗಳನ್ನು, ಹಿಂದುಸ್ತಾನಿ ಸಂಗೀತಕ್ಕೆ ಅಳವಡಿಸಿದ ಪಂಡಿತ ಮಲ್ಲಿಕಾರ್ಜುನ ಮನ್ಸೂರ ಅವರನ್ನು ಕೃತಜ್ಞತೆಯಿಂದ ಅ.ನ.ಕೃ. ಅವರು ಸ್ಮರಿಸಿದ್ದಾರೆ.

ಹೀಗೆ ಒಬ್ಬೊಬ್ಬ ಕಲಾವಿದರ ಕ್ರಿಯಾಶೀಲ ಪ್ರತಿಭೆಯ ಫಲಗಳನ್ನು ಆಯಾಕಾಲದ ಚರಿತ್ರೆ, ಪರಂಪರೆ ಹಾಗೂ ಸಮಸ್ಯೆಗಳ ಹಿನ್ನೆಲೆಯಲ್ಲಿ ವಿಮರ್ಶಿಸಿ ಮೌಲ್ಯ ಮಾಪನಕ್ಕೆ ತೊಡಗಿರುವದು, ಕೆಲವು ಸಂದರ್ಭದಲ್ಲಿ ಮೌಲಿಕ ಸಲಹೆಗಳನ್ನು ಸೂಚಿಸಿರುವದು ಈ ಕೃತಿಗಳ ಅತ್ಯಂತ ಮಹತ್ವದ ವೈಶಿಷ್ಟ್ಯಗಳಾಗಿವೆ.

ಒಟ್ಟಿನಲ್ಲಿ ಕನ್ನಡದ ಒಬ್ಬ ಮಹತ್ವಾಕಾಂಕ್ಷಿ ಬರಹಗಾರರಾಗಿದ್ದ ಅ.ನ.ಕೃ. ಅವರು ಜೀವನ ಚರಿತ್ರೆ, ವ್ಯಕ್ತಿಚಿತ್ರಣಗಳ ಮೂಲಕ ಸಮಗ್ರ

ಕರ್ನಾಟಕ ಸಂಸ್ಕೃತಿ ಪರಂಪರೆಯನ್ನೇ ಅನಾವೃತ್ತಾಗಿ ಪ್ರಕಟಿಸುವ ಹೆಬ್ಬಯಕೆಯಿಂದ ಹಮ್ಮಿಕೊಂಡಿದ್ದ ಯೋಜನೆಗಳು — ಪ್ರತಿಕೂಲ ಪರಿಸರ, ವೈಯಕ್ತಿಕ ತಾಪತ್ರಯ, ಮೇಲಾಗಿ ಇಂಥ ರಚನೆಗಳಿಗೆ ಸಹಜವಾಗಿಯೇ ಇರುವ ಸಾಮಗ್ರಿಗಳ ಅಭಾವದಿಂದಾಗಿ— ತೃಪ್ತಿಕರವಾಗಿ ಕಾರ್ಯಗತವಾಗದೇ ಹೋದದ್ದನ್ನು ಮರೆಯುವಂತಿಲ್ಲ. ಹಲವು ಹವ್ಯಾಸಗಳನ್ನು ಹಚ್ಚಿಕೊಂಡು ಅನಂತ ಹೋರಾಟಗಳಲ್ಲಿ ತೊಡಗಿದ ಅ.ನ.ಕೃಷ್ಣರಾಯರು ವೃತ್ತಿ ಬರಹಗಾರರಾಗಿದ್ದರಿಂದ ತಮ್ಮ ಪ್ರತಿಭೆಯನ್ನು ಆಗಿನ ಜನಪ್ರಿಯ ಸಾಹಿತ್ಯದ ಪ್ರಕಾರವಾದ ಕಾದಂಬರಿಯತ್ತ ಕೇಂದ್ರೀಕರಿಸುವದು ಅನಿವಾರ್ಯವಾಗಿತ್ತು. ಇದರಿಂದಾಗಿ ಜೀವನ ಚರಿತ್ರೆಗಳಿಗೆ ಸರಿಯಾದ ಪ್ರತಿಭಾಪೂರೈಕೆಯಾಗಲಿಲ್ಲ. ಅವರ ಜೀವನ ಚರಿತ್ರೆಗಳು ಓದುಗರಿಗೆ ಕೊಡುವ ತೃಪ್ತಿಯು ಮಾತೊತ್ತಟ್ಟಿಗಿರಲಿ, ಸ್ವತಃ ಲೇಖಕರಿಗೇ ಸಂತೃಪ್ತಿಯನ್ನು ಕೊಟ್ಟಂತಿಲ್ಲ. ಭಾರತದ ಭಾಪು, ಕನ್ನಡ ಕುಲರಸಿಕರು, ಅಲ್ಲಮಪ್ರಭು, ಬಸವಣ್ಣನವರ ಅಮೃತ ವಾಣಿ ಮೊದಲಾದ ಕೃತಿಗಳಲ್ಲಿ ತಮ್ಮ ಇತಿಮಿತಿಗಳನ್ನು, ಕೃತಿಗಳ ಕುಂದು ಕೊರತೆಗಳನ್ನು, ಅವುಗಳಿಗೆ ಕಾರಣವಾಗಿದ್ದ ಪ್ರತಿಕೂಲ ವಾತಾವರಣವನ್ನು ಹೇಳಿ ತಮ್ಮ ಅತೃಪ್ತಿ, ಅಸಮಾಧಾನಗಳನ್ನು ವ್ಯಕ್ತಪಡಿಸಿರುವದನ್ನು ಇಲ್ಲಿ ನೆನೆಯಬಹುದಾಗಿದೆ. ಬಹಳಷ್ಟು ಕಡೆಗಳಲ್ಲಿ ಕಂಡುಬರುವ ಸಂಭಾಷಣೆಯಲ್ಲಿಯ ಅನೌಚಿತ್ಯ, ವರ್ಣನೆ–ವಿವರಣೆಗಳಲ್ಲಿ ಕಂಡುಬರುವ ವೈಭವೀಕರಣ ಪ್ರವೃತ್ತಿ, ಅತ್ಯುಕ್ತಿ ಹಾಗೂ ಆತ್ಮಪ್ರತ್ಯಯಗಳಿಂದಾಗಿ ಕೆಲವು ಕೃತಿಗಳ ಸಾಹಿತ್ಯಿಕ ಮೌಲ್ಯ ಕುಸಿದಂತೆ ಕಂಡುಬಂದರೂ ಅವರ ಆತ್ಮಚರಿತ್ರೆ, ಕನ್ನಡ ಕುಲರಸಿಕರು, ಕರ್ನಾಟಕ ಕಲಾವಿದರು, ನನ್ನನ್ನು ನಾನೇ ಕಂಡೆ,— ಈ ಎಲ್ಲ ಕೃತಿಗಳು ಅಂದಿನ ಪರಿಸರದ ದಾಖಲೆಗಳಾಗಿ, ಸಾಹಿತ್ಯ–ಕಲೆ–ಸಂಸ್ಕೃತಿಯ ಅಭ್ಯಾಸಿಗಳಿಗೆ ಉತ್ತಮ ಆಧಾರ ಗ್ರಂಥಗಳಾಗಿ ಕನ್ನಡ ಸಾಹಿತ್ಯಕ್ಕೆ ಅ.ನ.ಕೃ. ಅವರಿಂದ ಸಂದ ಬೆಲೆಬಾಳುವ ಕೊಡುಗೆಗಳ ಸಾಲಿನಲ್ಲಿ ನಿಲ್ಲಬಲ್ಲವುಗಳಾಗಿವೆ.

———

# ಅ.ನ.ಕೃ. ಅವರ ಇತರ ಕೃತಿಗಳು

—ಎಚ್. ಜಿ. ಲೋಕೂರ

೧

ಅ.ನ.ಕೃ. ಅವರ ೨೫೦ ಕ್ಕೂ ಮಿಕ್ಕ ಕೃತಿಗಳಲ್ಲಿ ಅರ್ಧಭಾಗ ಕಾದಂಬರಿಗಳೇ. ಇನ್ನರ್ಧ ನಾಟಕ-ಕಥೆ-ಜೀವನ ಚರಿತ್ರೆ, ವಿಮರ್ಶೆ, ಪ್ರಬಂಧ ಸಂಪಾದನೆ-ಅನುವಾದ. ಕೊನೆಯ ಕಾಲುಭಾಗವನ್ನು ಇಲ್ಲಿ ಪರಿಶೀಲಿಸಿದೆ. ಈ ಕಾದಂಬರಿ ಸಾರ್ವಭೌಮರಿಂದ ೩೦ಕ್ಕೂ ಮೀರಿ ವೈಚಾರಿಕ ಕೃತಿ ರಚಿತವಾಗಿರುವುದು ತುಸು ಅಚ್ಚರಿಯೇ. ಇದು ರಾಯರ ವ್ಯಾಪಕ ಆಸಕ್ತಿ ಹಾಗೂ ಪ್ರತಿಭಾವೈಶಾಲ್ಯದ ಕುರುಹು. 'ನಾಸ್ತಿ ಕಶ್ಚಿದವಿಷಯೋ ನಾಮ ಧೀಮತಾಂ' (–ಕಾಲಿದಾಸ)

'ಜೀವನ ವಿಮರ್ಶಕ ಸಾಹಿತ್ಯ ಪ್ರಕೃತಿ, ಸಾಹಿತ್ಯವಿಮರ್ಶೆ ಸಂಸ್ಕೃತಿ' (–ಬೇಂದ್ರೆ). ವಿಮರ್ಶೆಯನ್ನು ವರ್ಣನಾತ್ಮಕ-ಸಂಶೋಧನಾತ್ಮಕ-ದರ್ಶನಾತ್ಮಕ ಎಂದು ತ್ರಿಭಜಿಸಿದರು ಕುವೆಂಪು. ಇವುಗಳಲ್ಲಿ ಮೊದಲ ಎರಡೂ ಬಗೆ ಅ.ನ.ಕೃ. ಅವರಲ್ಲಿ ಕಂಡು ಬರುತ್ತವೆ; ಅವರು ಒಳ್ಳೆಯ ಸೃಜನಾತ್ಮಕ ರಸವಿಮರ್ಶಕ ಎಂದು ಸಿದ್ಧಪಡಿಸುತ್ತವೆ.

ಇಂಥ ವಿಮರ್ಶಕನ ಬಗ್ಗೆ 'ಸಾಹಿತ್ಯ ಮತ್ತು ಜೀವನ' (ಪು.೩೯-೫೭) ಹಾಗೂ 'ಸಜೀವ ಸಾಹಿತ್ಯ' (ಪು.೭೪-೭೮) ಇವುಗಳಲ್ಲಿ ಅವರೇ ಬರೆದ ೨ ಲೇಖಗಳಿವೆ— 'ನನ್ನನ್ನು ನಾನೇ ಕಂಡೆ' ಎಂಬಂತೆ ಅವುಗಳ ಸಾರವಿಷ್ಟು: 'ರವಿಕಾಣದ್ದನ್ನು ಕವಿ ಕಂಡರೆ, ಕವಿ ಕಾಣದ್ದನ್ನು ವಿಮರ್ಶಕ ಕಾಣುವ. ಕಲಾಸೌಂದರ್ಯದ ಮಾರ್ಗದರ್ಶಿಯಾಗಿ, ಕವಿ–ಸಹೃದಯರ ಮಧ್ಯಸ್ಥ ಕಲಾವಿದನಾಗಿ, ಸಮಾಜದ ಒವಜನೆನಿಸುವ. ಕವಿ ತನ್ನ ಕೃತಿಯ ಬಗ್ಗೆ ನಿಷ್ಪಕ್ಷತೆ ದೋರವ ಕಾರಣ ವಿಮರ್ಶಕನ ಅಗತ್ಯವಿದ್ದು, ಸತ್ಕೃತಿಯನ್ನಾತ ಜನತೆಗೆ ಬೆಳೆಸಬೇಕು— ಕವಿ ಇಡಿಯಾಗಿ ಹೇಳಿದ್ದನ್ನು ಬಿಡಿ ಬಿಡಿಯಾಗಿ ಹೇಳಿ.

ರಸಭಾವಗಳಿಗಿಂತ ವ್ಯಾಕರಣ ಮುಖ್ಯವೆಂಬುದೂ, ಹಳೆಯದು ಶ್ರೇಷ್ಠ ಹೊಸದು ನಿಕೃಷ್ಟ ಎಂಬುದೂ ಸರಿಯಲ್ಲ. ತಕ್ಕ ಯೋಗ್ಯತೆ ಇಲ್ಲದೆ ಕೃತಿಯನ್ನು ಟೀಕಿಸುವುದು ಸರಸ್ವತಿದ್ರೋಹ. ಬಹುಶಃ ಈ ಸೂತ್ರಗಳಿಗೆ ತಕ್ಕಂತೆ ಬರೆದವರು ಅ.ನ.ಕೃ.

ಅವರ ಕೆಲ ವಿಮರ್ಶೋಕ್ತಿಗಳಿಗೆ ಉದಾಹರಣೆ: 'ವಿಮರ್ಶಕರು ಗ್ರಂಥ ವಿಮರ್ಶಿಸುವ ಬದಲು ಗ್ರಂಥಕರ್ತನನ್ನು ವಿಮರ್ಶಿಸುತ್ತಾರೆ. ಕವಿ ದೃಷ್ಟಿಯ ಬದಲು ತಮ್ಮ ದೃಷ್ಟಿ ಆರೋಪಿಸುತ್ತಾರೆ. ವಿಮರ್ಶಕನ ಸಂಬಂಧ ಜನತೆಯೊಂದಿಗೇ ವಿನಾ ಕವಿಯೊಂದಿಗಲ್ಲ— ಕೃತಿ ಹೊರಬಿದ್ದ ಮೇಲೆ ಕರ್ತೃವಿಗೇನು ಸಂಬಂಧ? ವಿಮರ್ಶೆಯ ಬೆಳಕಿನಲ್ಲಿ ತಿದ್ದಲಾಗುವುದೇ?' (ಏಕಾಗಬಾರದು ಪುನರ್ಮುದ್ರಣದಲ್ಲಿ?) ಜನರ ರುಚಿ ತಿದ್ದುವಲ್ಲಿ 'ಒಂದೆರಗಳಿಗೆ ತನ್ನ ಕೀಳು ರುಚಿಯನ್ನು ಕೆಣಕಬಲ್ಲ ವಸ್ತುವಿಗಿಂತ ಶಾಶ್ವತ ಹಿತ ನೀಡಬಲ್ಲ ವಸ್ತು ಹೆಚ್ಚು ಮಾನ್ಯವೆಂಬ ಕಲ್ಪನೆ ಜನತೆಗೆ ಬರುವಂತೆ ಮಾಡಬೇಕು ವಿಮರ್ಶೆ.' ಈ ನುಡಿಮುತ್ತು ರಾಯರ ಕಾಮಪ್ರಚೋದಕ ಕಾದಂಬರಿಗಳಿಗೇ ಎಷ್ಟು ಚೆನ್ನಾಗಿ ಅನ್ವಯವಾಗುತ್ತದೆ! 'ನಮ್ಮ ಸಾಹಿತ್ಯವಿನ್ನೂ ಜನತೆಯನ್ನು ಮುಟ್ಟಿ ಅವರ ಅಭಿರುಚಿಯನ್ನು ಸೆರೆಹಿಡಿಯುವ ಸಾಹಸಮಾಡಿಲ್ಲ. ವಿಲಾಸದ ದಾರಿಯಲ್ಲಿ ವಿಕಾಸವನ್ನೂ ಸಾಧಿಸುವುದೇ ಉತ್ತಮ ಸಾಹಿತ್ಯ.'

೨

ರಾಯರ ಸಾಹಿತ್ಯ ವಿಮರ್ಶೆಗೆ ಮುಖ್ಯವಾಗಿ ಗಮನಿಸಬೇಕಾದ ಗ್ರಂಥಗಳೆಂದರೆ ವೀರಶೈವ ಸಾಹಿತ್ಯ–ಸಂಸ್ಕೃತಿ ('೪೩), ಸಾಹಿತ್ಯ ಜೀವನ ('೪೪), ಸಾಹಿತ್ಯ–ಕಾಮಪ್ರಚೋದನೆ ('೫೩), ಸಂಸ್ಕೃತಿಯ ವಿಶ್ವರೂಪ ('೫೫), ಸಜೀವ ಸಾಹಿತ್ಯ ('೬೫), ಸಾರ್ಥಕಸಾಹಿತ್ಯ ('೬೬),

ಇವುಗಳಲ್ಲಿ ಮೊದಲ ಗ್ರಂಥ ಪೂರ್ತಿ ವೀರಶೈವ ಸಾಹಿತ್ಯಕ್ಕೆ ಮೀಸಲಾಗಿದ್ದು, ಸಂಸ್ಕೃತಿ ಶಬ್ದವನ್ನು ರಾಜಾರಾಯರ cat & Shakespear ಎಂಬಂತೆ ಸುಮ್ಮನೆ ಸೇರಿಸಿಕೊಂಡಿದೆ; ಸಾಹಿತ್ಯದಲ್ಲೇ ಸಂಸ್ಕೃತಿ ಎಂದು ಬೇಕಾದರೂ ಹೇಳಬಹುದು. ವೀರಶೈವ ಸಾಹಿತ್ಯದ ಕನ್ನಡತನ ರಾಯರ ಹೃದಯವನ್ನು ಸೆರೆಹಿಡಿದಿದ್ದು, ಅದೇ ಕನ್ನಡ ಸಾಹಿತ್ಯ ಎನ್ನುವಷ್ಟು ದೂರ

ಅವರ ವಿಚಾರಲಹರಿ ಮುಂದುವರಿದಿದೆ! ಆ ಸಾಹಿತ್ಯಾಧ್ಯಯನದ ಫಲವಾಗಿ ವೀರಶೈವ ಸಾಹಿತ್ಯ ಚರಿತ್ರೆಯನ್ನವರು ಈ ಗ್ರಂಥಾರ್ಧ (೧೦೦ಪುಟ)ದಲ್ಲಿ ನಿರೂಪಿಸಿದ್ದಾರೆ. ೨೦ಕ್ಕೂ ಹೆಚ್ಚು ಮುಖ್ಯ ಕವಿಗಳ ಪರಿಚಯದೊಡನೆ ಉಚಿತ ಉದಾಹರಣೆಗಳ ಮೂಲಕ ಕಾವ್ಯ ಪರಿಚಯವನ್ನೂ ಕೊಡುತ್ತ ಹೋಗಿದ್ದಾರೆ. ಕೊನೆಗೆ ೧೦೧ ಇತರ ಕವಿಗಳ ಹೆಸರು–ಕಾಲ–ಕೃತಿಗಳನ್ನು ಪಟ್ಟಿಮಾಡಿದ್ದಾರೆ. (ವಚನ ಸಾಹಿತ್ಯ ಕೈಪಿಡಿ ಎಂಬ ಗ್ರಂಥ ಬೇರೆ ಇದೆ.) ಅವರ ವೈಚಾರಿಕ ಗದ್ಯದ ಮಿಂಚಿಗೆ ಉದಾಹರಣೆ: 'ಹರಿಹರ ತನ್ನ ಭಕ್ತಿ ವೀಣೆಗೆ ಜಗದ ಜೀವಿಗಳ ಹೃದಯ ತಂತಿಗಳನ್ನು ಕೂಡಿಸಿ ಘನಗೀತೆಯನ್ನು ಹಾಡುತ್ತಾನೆ. ಹರಿಹರನಿಗೂ ರಾಘವಾಂಕನಿಗೂ ಕನ್ನಡ ಕಾವ್ಯದೇವಿಯನ್ನು ಚಿನ್ನದ ಸಂಕೋಲೆಗಳಿಂದ ಬಿಡಿಸಿದ ಕೀರ್ತಿ ಸಲ್ಲುತ್ತದೆ.. ಮಹಾಪುರುಷರ ಜೀವನ ಚರಿತ್ರೆ ಬರೆಯುವವರಿಗೆ ಪ್ರಭುಲಿಂಗಲೀಲೆ ಮಾದರಿ. ನಿಜಗುಣ ಶಿವಯೋಗಿ ಕಾವ್ಯದ ತೆರೆಯ ಮೇಲೆ ನಿಂತು ಆಧ್ಯಾತ್ಮದ ಮುಗಿಲನ್ನು ಮುಟ್ಟುತ್ತಾನೆ.'

ಈ ಗ್ರಂಥದ ಉತ್ತರಾರ್ಧದಲ್ಲಿ 'ಅನುಭವಮಂಟಪ–ಹರೀಶ್ವರನ ಇಬ್ಬರು ಮಹಾನುಭಾವರು (ಬಸವ–ಅಲ್ಲಮ)–ಅಕ್ಕನ ಆಧ್ಯಾತ್ಮಿಕ ಪ್ರಗತಿ–ಹರಿಶ್ಚಂದ್ರಕಾವ್ಯ–ಸರ್ವಜ್ಞ ಎಂಬ ೫ ಪ್ರಬಂಧಗಳಿದ್ದು, ಸೂಫಿ ಧರ್ಮ ಕುರಿತ ಬರಹ ಅನುಬಂಧವಾಗಿದೆ (ವೀರಶೈವದೊಡನೆ ತಾದಾತ್ಮ್ಯ ತೋರಿದ್ದರಿಂದ).

ಇವುಗಳಲ್ಲಿ ೪೨ ಪುಟ ಹಬ್ಬಿರುವ ಹರಿಶ್ಚಂದ್ರ ಕಾವ್ಯದ ಸಮೀಕ್ಷೆ ಸರಸವಾಗಿದೆ. ಅಲ್ಲಿಯ ಕೆಲ ಸೂಕ್ತಿ ಇವು: 'ಹರಿಶ್ಚಂದ್ರಕಾವ್ಯ ಕನ್ನಡದ ಕಾವ್ಯಕೀರ್ತಿಯನ್ನು ಬಹಳ ಮೇಲ್ಮಟ್ಟಕ್ಕೊಯ್ಯಿತು.... ಅದು ಕನ್ನಡ ವಾಗ್ದೇವಿಯ ಮುಕುಟದಲ್ಲಿಯ ಅನರ್ಘ್ಯ ರತ್ನ'.

ರಾಯರು ಮಾನವತಾವಾದಿ ಸರ್ವಜ್ಞನನ್ನೂ ಬಹಳ ಮೆಚ್ಚಿದ್ದರಿಂದ ಅನ್ಯತ್ರವೂ ೨ ಲೇಖ ಇತ್ತು, ಒಂದೆಡೆ 'ಒಂದು ಜನಾಂಗದ ಜೀವನದ ಮೇಲೆ ಇಷ್ಟು ಪ್ರಭಾವ ಮಾಡಿರುವ ಕವಿ ಇನ್ನೊಬ್ಬನಿಲ್ಲ' ಎಂದಿರುವುದು ಅತಿಶಯೋಕ್ತಿ ಎನಿಸಿ ಅರಿವಿನ ಕಣದಲ್ಲಿ ಭಿನ್ನಾಭಿಪ್ರಾಯಕ್ಕೆಡೆ ಕೊಡು

ವಂತಿದೆ. ಏಕೆಂದರೆ ಮೀರಾ–ತುಕಾರಾಂ–ವೇಮನರೂ ಆಯಾ ಪ್ರಾಂತೀಯರಿಗೆ ಹಾಗೆಯೇ ಎನಿಸಬಹುದು. ಅಲ್ಲದೆ ಈ ಅನುಭಾವ ಕವಿಯ ಕುರಿತು ಮೊದಲು 'ಅವಧೂತಮಾರ್ಗದಲ್ಲಿ ನಡೆದವರು ಜಾತ್ಯಾತೀತರಾಗುತ್ತಾರೆ.... 'ಸರ್ವಜ್ಞ ಅವಧೂತಮಾರ್ಗಾವಲಂಬಿ' ಎಂದ ರಾಯರು '೪೩ ರಲ್ಲಿ ಸರ್ವಜ್ಞನ ಗುರು ಬಸವೇಶ್ವರ.... ಅಣ್ಣನ ಮಾರ್ಗ ಅನುಸರಿಸಿ, ಅವನ ವಾಣಿ ಮತ್ತೆ ಕೇಳಿ ಬರುವಂತೆ ಮಾಡಿದನು' ಎಂಬಂತೆ ಅಭಿಪ್ರಾಯ ತಿದ್ದಿಕೊಂಡಿದ್ದಾರೆ.

ಈ ಪ್ರಬಂಧಗಳೊಡನೆ ಅ. ನ. ಕೃ. ಅನ್ಯ ಸಂಗ್ರಹಗಳಲ್ಲಿತ್ತ 'ದಾಸಿಮಯ್ಯನ ವಚನ–ಅಣ್ಣ ಸಾಧಿಸಿದ ಸಮಾಜ ಸಂಘಟನೆ–ವಚನಕಾರ ಬಸವೇಶ್ವರ–ಅಣ್ಣನ ವಚನ–ದರ್ಶನ–ಅಲ್ಲಮ' ಮೊದಲಾದ ಲೇಖನಗಳನ್ನೂ 'ಸಾಹಿತ್ಯ–ಯುಗಧರ್ಮ' ಎಂಬ ಗ್ರಂಥವನ್ನೂ ಸೇರಿಸಿಕೊಂಡರೆ ವೀರಶೈವ ಸಾಹಿತ್ಯಾಧ್ಯಯನಕ್ಕೆ ಒಳ್ಳೆಯ ಪ್ರವೇಶಿಕೆ ದೊರೆಯುತ್ತದೆ. 'ಬಸವಣ್ಣನವರ ಅಮೃತವಾಣಿ'ಯು ೯೦ ಪುಟಗಳಲ್ಲಿ ಅಣ್ಣನ ಜೀವನ ಚರಿತ್ರೆಯನ್ನೂ ಮಿಕ್ಕ ಭಾಗದಲ್ಲಿ ಸರ್ವಗ್ರಾಹ್ಯವಾದ ೨೦೦ ವಚನಗಳನ್ನು (ಅರ್ಥಾನುಸಾರ ಪಾದವಿಂಗಡಿಸಿ) ಕೊಟ್ಟಿದ್ದಾರೆ.

'ಸಾಹಿತ್ಯ-ಜೀವನ, ಸಂಸ್ಕೃತಿಯ ವಿಶ್ವರೂಪ, ಸಜೀವ ಸಾಹಿತ್ಯ'ಗಳಲ್ಲಿ ಕನ್ನಡ ಸಾಹಿತ್ಯದ ಬಗ್ಗೆ ಒಂದು ಸಿಂಹಾವಲೋಕನವಲ್ಲದೆ ಬೇರೆ ೫ ಲೇಖನಗಳಿವೆ: ನಮ್ಮಲ್ಲಿ ಬೆಳೆಯುತ್ತಿರುವ ಸಾಹಿತ್ಯ–ಬೇಕಾದ ಸಾಹಿತ್ಯ-ಸಾಹಿತ್ಯದ ಸ್ಥಿತಿಗತಿ–ವಾಸ್ತವತೆ–ಯುಗಧರ್ಮ. ಕಥೆ ಕಾದಂಬರಿಯ ಬಗ್ಗೆ ೪ ನಿಬಂಧ: ಕನ್ನಡದಲ್ಲಿ ಸಣ್ಣಕಥೆ–ಕಾದಂಬರಿಯ ಭಾವಪ್ರವಾಹ–ಕಾದಂಬರಿಯಲ್ಲಿ ವಾಸ್ತವತೆ-ಕಾದಂಬರಿ ಮತ್ತು ಕಾದಂಬರಿಕಾರರು. ರಂಗಭೂಮಿ–ನಾಟಕ– ನಾಟಕಕಾರ ಬಗ್ಗೆ ಇರುವ ಕೆಲ ಬರಹ: ನಾಟಕ–ಸಾಮಾಜಿಕ ನಾಟಕ_ಕಳೆದ ಕನ್ನಡ ನಾಟಕ– ಕನ್ನಡ ರಂಗಭೂಮಿ ರವೀಂದ್ರರ ನಾಟಕ–ವಾಸುದೇವಾಚಾರ್ಯರು_ಬೆಳ್ಳಾವೆಯವರು–ಕೈಲಾಸಂ–ಕೈ ಚಿತ್ರಿಸಲೆಳಸಿದ್ದ ತ್ರಿಶಂಕು. ರಸಾನುಭವ–ಹಾಸ್ಯ ಮೊದಲಾದುವು

ಕಾವ್ಯಮೀಮಾಂಸೆಗೆ ಸಂಬಂಧಿಸಿದ ಲೇಖನ. ಉಳಿದ ವಿಷಯಗಳೆಂದರೆ ಹೆಣ್ಣುಮಕ್ಕಳ ಹಾಡು-ಸಜೀವಸಾಹಿತ್ಯ-ರವೀಂದ್ರರ ಕಲಾರಾಧನೆ-ಸಂಸ್ಕೃತಿ ಎಂದರೇನು- ಲಕ್ಷ್ಮೀಶನ ಸೀತಾರಾಮರು ಇತ್ಯಾದಿ.

ಕೊನೆಯ ಸರಸ ವಿಮರ್ಶೆಯಲ್ಲಿ 'ಕವಿಯ ಯೋಗ್ಯತೆಗೆ ಪುರಸ್ಕರಿಸೋಣ, ಎಡವಿದ ಕತೆಗೂ ಕಣ್ಣು ಹಾಯಿಸೋಣ. ರಸಾರ್ದ್ರವಿಮರ್ಶಕ ಕವಿಯ ಲೋಪದೋಷ ತೋರಿದಾಗ, ಕವಿ ಗುರಿ ಮುಟ್ಟಲಿಲ್ಲೆಂಬ ತನ್ನ ವ್ಯಾಕುಲ ವ್ಯಕ್ತಪಡಿಸುವ' ಎಂದು ಅಭಿಪ್ರಾಯಿಸಿದ್ದಾರೆ. ಲಕ್ಷ್ಮೀಶ ಸೀತಾರಾಮರ ದಿವ್ಯ ವ್ಯಕ್ತಿತ್ವನ್ನೊಪ್ಪಿಯೂ ಅವರ ಜೊಲುವು ಸರಸಗಳನ್ನು ಮಾನವರಂತೆ ಬಣ್ಣಿಸುವ. ಅಪಕೀರ್ತಿಗಂಜದ ರಾಮ ಲವಕುಶರ ಕಾಳಗದಲ್ಲಿ ಸುಗ್ರೀವನನ್ನು ಕುರಿತು 'ಇವರ ತಂದೆ ಯಾರೆಂದು ಕೇಳಿನ್ನಬೇಕಾದರೆ ಸೀತೆಯ ನೀತಿಯಲ್ಲಿ ಸಂದೇಹಿ ಎನ್ನಬೇಕು. ಅವಳ ಹೆಸರನ್ನಾಲಿಸಿಯೇ ಆತ ಮೂರ್ಛೆ ಬೀಳುವ. 'ನಿನ್ನ ಸುತರ್ ಪರಿಗ್ರಹಿಸೆಂದು' ಲಕ್ಷಣ ನುಡಿದರೂ 'ನೀವಾರ ಮಕ್ಕಳೆಂದು' ಪ್ರಶ್ನಿಸುವ. 'ಸೀತೆ ಪರಿಶುದ್ಧಳೆಂದು' ತಂದೆಯ ಅಶರೀರ ವಾಣಿಯಾದರೂ 'ಎಂತಾದೊಡಂ ಪುತ್ರರಂ ಪಡೆದಳ್' ಎನ್ನುವ! ಅವಳ ನ್ನೀಕ್ಷಿಸದೆ ಮರಳುವ. ಸುತರು ಹಿಂಬಾಲಿಸಿದರು. ಕರೆಯದ ಸೀತೆಯನ್ನು ವಾಲ್ಮೀಕಿ ಮುಟ್ಟಿಸಿ ಬರುವ! ಸ್ತ್ರೀ ಸಾಮಾನ್ಯಳೂ ಹೀಗೆ ವರ್ತಿಸುವುದಿಲ್ಲ. ಆದ್ದರಿಂದ 'ಸೀತಾ ವನವಾಸ ಹದಗೆಟ್ಟದ್ದು, ಸೀತಾರಾಮರ ಕೀರ್ತಿಗೆ ಗೌರವ ತರುವಂತಿಲ್ಲ.... ಸೀತೆಯೂ ನಮ್ಮ ಸ್ವಪ್ನಚಿತ್ರವನ್ನು ಚಿಂದಿ ಚಿಂದಿ ಮಾಡುತ್ತಾಳೆ. ಇಲ್ಲಿ ನಾವು ಕಾಣುವುದು ಧರಿತ್ರಿಯಂತೆ ಸಹನಶೀಲೆಯಾದ ಸೀತೆಯನ್ನಲ್ಲ. ಗಂಡನ ಕಠೋರತೆಗೆ ಸಿಡಿಮಿಡಿಗೊಳ್ಳುವ ಒಬ್ಬ ಸಾಧಾರಣ ಸ್ತ್ರೀಯನ್ನು': ಈ ಸಂದರ್ಭದಲ್ಲಿ ಲಕ್ಷಣನೂ ಧರ್ಮಪಕ್ಷಪಾತ ದೋರದೆ, ರಾಜಾಜ್ಞೆಪಾಲಿಸುವ ದೃಷ್ಟಿದೋರವೆ ಹೋಗುವುದು ಅವನ ಹೃದಯ ದೌರ್ಬಲ್ಯವಾಗಿದ್ದು, ಅದಕ್ಕಾಗಿ ನಾವು ಅನುಕಂಪಿಸಬೇಕಲ್ಲದೆ, ರಾಯರಂತೆ ಕಠಿಣರಾಗಿ ಆಕ್ಷೇಪಿಸಿ ಪ್ರಯೋಜನವಿಲ್ಲ. ಏಕೆಂದರೆ ತೌಲನಿಕ ವಿಮರ್ಶೆಯಲ್ಲಿ ಮೂಲಕೃತಿಯೇ ದೋಷಾರ್ಹವೆನಿಸಬಹುದು.

'ಸಾರ್ಥಕ ಸಾಹಿತ್ಯ'ದಲ್ಲಿ ಮಣಿಪಾಲ ಸಾಹಿತ್ಯ ಸಮ್ಮೇಲನದ ಅಧ್ಯಕ್ಷ ಭಾಷಣ ಹಾಗೂ ಶಿವಮೂರ್ತಿಶಾಸ್ತ್ರಿಗಳಿಗಿತ್ತ ಉತ್ತರ ಅಡಕವಾಗಿವೆ.

೪

ಅ.ನ.ಕೃ. ಸವ್ಯಸಾಚಿಯಾದರೂ ವಿವಾದ್ಯ ವ್ಯಕ್ತಿ. 'ಕನ್ನಡದಲ್ಲಿ ೧೦ ವರ್ಷಗಳಿಗೊಮ್ಮೆಯಾದರೂ ಒಂದು ಹೊಸ ಚರ್ಚೆಗೆ ಕೇಂದ್ರವಾಗುತ್ತಾರೆ.' (-ಕನ್ನಡ ಕಟ್ಟಿದವರು ಪು ೭೫, ಕು. ಶಿ. ಹರಿದಾಸಭಟ್ಟ.) 'ನಗ್ನಸತ್ಯ-ಶನಿಸಂತಾನ-ಸಂಜೆಗತ್ತಲು-ಅಪರಂಜಿ' ಈ ಕಾದಂಬರಿಗಳು ಅಶ್ಲೀಲವೆಂಬ ಟೀಕೆಗೆ ಉತ್ತರವಾಗಿ ಬಂದ 'ಸಾಹಿತ್ಯ-ಕಾಮಪ್ರಚೋದನೆ' ಪ್ರಾಸಂಗಿಕ ಪ್ರಬಂಧವಾದರೂ ಪ್ರಕ್ಷೋಭಿಕವೆನಿಸಿ ೬ ತಿಂಗಳಲ್ಲಿ ಮಾರಾಟವಾಯಿತು. ನೂರಾರು ಸಾಹಿತ್ಯ-ಕನ್ನಡ-ತೆಲುಗು ಅವತರಣಿಕೆಯಿತ್ತು ಪ್ರಗತಿಶೀಲ ಸಾಹಿತ್ಯದ ನಿಲುಮೆಯನ್ನಿಲ್ಲಿ ಸಮರ್ಥಿಸಲಾಗಿದೆ.

ರಾಯರ ಒಟ್ಟು ಅಭಿಪ್ರಾಯ ಹೀಗೆ: ಸಮಾಜ ಕಾಲಕಾಲಕ್ಕೆ ಬದಲಾಗುತ್ತಿದ್ದು, ಹೆಣ್ಣನ್ನು ಶ್ರೇಷ್ಠವಾಗಿ ಕಂಡ ಕಣ್ಣು 'ಇಂದು ಹೀನವೆಂದೆಣಿಸಿದೆ. ನಮ್ಮ ಹಿಂದಿನ ಸಾಹಿತ್ಯವೂ ಅವಳನ್ನು ಭೋಗವಸ್ತುವೆಂದೇ ವರ್ಣಿಸಿದೆ. 'ಮೋಡ ಮುಚ್ಚಿದ ಕನ್ನಡ ಕಾವ್ಯಾಕಾಶದಲ್ಲಿ ಚಂದ್ರಮತಿಯೊಂದು ಸೆಳೆಮಿಂಚು'. ಜನಾಂಗದಾರೋಗ್ಯಕ್ಕೆ ಕತೆ-ಕಾದಂಬರಿಗಳಂತೆ ಲೈಂಗಿಕ ಗ್ರಂಥಗಳೂ ಅಗತ್ಯ. ಕಾಮವೂ ಪುರುಷಾರ್ಥವಾಗಿ ನಮ್ಮವರು ಶೃಂಗಾರ ಕಡೆಗಣಿಸಿಲ್ಲ. ಅಲ್ಲದೆ ಕಾಮಪ್ರಚೋದನೆಗೆ ಸಾಹಿತ್ಯ ಒಂದೇ ಮಾರ್ಗವಲ್ಲ. ಶೀಲಾಶ್ಲೀಲ ನಿರ್ಣಯ ಸೂಕ್ಷ್ಮಸಮಸ್ಯೆಯಾಗಿದ್ದು, ನೀತಿಯ ಮಾನದಂಡ ಕಲೆಯನ್ನಳೆಯದು. ಅಶ್ಲೀಲಶಬ್ದ ನೀತಿಶಾಸ್ತ್ರದ್ದು, ಕಾಮಪ್ರಚೋದನೆ ವೈದ್ಯಪ್ರಪಂಚದ್ದು. ಒಂದು ಶಾಸ್ತ್ರದ ಪಾರಿಭಾಷಿಕ ಶಬ್ದಗಳನ್ನು ಇನ್ನೊಂದಕ್ಕೆ ಬಳಸಿದರೆ ಅನರ್ಥ. ಜೀವನದಂತೆ ಅದರ ಪ್ರತೀಕವಾದ ಸಾಹಿತ್ಯದಲ್ಲೂ ಪ್ರಗತಿಗೆ ಹೋರಾಟ ನಡೆದಿದ್ದು, 'ಸಂಪ್ರದಾಯದವರು ಕದಡುವ ಬಗ್ಗಡ ತಿಳಿಯಾಗಿ ಕಾಲಕಾಲಕ್ಕೆ ಮತ್ತೂ ತೀಕ್ಷ್ಣ ಸಾಹಿತ್ಯ ಬಂದು ಅದನ್ನೇ ಸಂಪ್ರದಾಯವಾದ ಎನ್ನಿಸುತ್ತದೆ. ಜಳ್ಳು ತೂರಿ ಕಾಳು ಉಳಿಸಿಕೊಳ್ಳಬೇಕು ಮುಂದಿನ ಪೀಳಿಗೆ. ಜರಡಿಯ ಕೆಲಸವನ್ನು ಕಾಲನೇ ನಿರ್ವಹಿಸುತ್ತಿರುವಾಗ ನಾವು ತೊಂದರೆಪಟ್ಟುಕೊಳ್ಳಬೇಕಿಲ್ಲ.'

ಅ.ನ.ಕೃ. ಕಾದಂಬರಿ ವೇಶ್ಯಾಸಮಸ್ಯೆಗೆ ಸಂಬಂಧಿಸಿ ಅವರನ್ನುದ್ಧರಿಸ ಹೊರಟರೂ ವೇಶ್ಯೆಯರ ಕತೆ ಮಾತ್ರವಾಗಿ ಕಾಮಪ್ರಚೋದಕ ಚಿತ್ರ

ವಿಸ್ತೃತವು, ಸಮಸ್ಯೆ ಏನೂ ಪರಿಹಾರವಾಗಲಿಲ್ಲ. ಪ್ರಾಚೀನ ಸಾಹಿತ್ಯದ ಶೃಂಗಾರ ಸಾಂಪ್ರದಾಯಿಕವಾದರೂ ಉದ್ರೇಕಕಾರಿಯಲ್ಲ. ಮುಚ್ಚಿ ಹೇಳಿದ್ದು ಸಭ್ಯ–ಬಿಚ್ಚಿ ಹೇಳಿದರೆ ಅಸಭ್ಯ ಎಂಬ ಉತ್ತರ, ಕಲೆಯಲ್ಲಿ ರೀತಿಗೂ ಮಹತ್ವವಿರುವುದನ್ನು ಎತ್ತಿ ತೋರುತ್ತದೆ. ಲೇಖಕನ ದೃಷ್ಟಿಕೋನದಿಂದ ಅಶ್ಲೀಲತೆಯು ನಿರ್ಣಯವಾಗುತ್ತದೆ. ಅಡಿಗೆಯಾತ ಮನೆಯ ವಿಧವೆಗೆ ಸಂಭೋಗ ಸುಖವಾಗಿತ್ತೇ ಎಂಬುದಕ್ಕೆ 'ಕೇಳುವಿರಾ– ಕೈಲಾಸ ಕಂಡಂತಾಯಿತು. ಎಂಬಂಥ ಉತ್ತರ ಅಶ್ಲೀಲ ಎಂದು ಯಾರಾದರೂ ತಟ್ಟನೆ ಹೇಳಬಹುದು. ಭಾವಗಳ ಇಂಥ ಅಗ್ಗದ ಬಳಕೆ, ಶಾಬ್ದಿಕ ಕಾಮ ಅಸಹ್ಯಕರ. 'ಕಲೆಗಾಗಿ ಕಲೆ' ಎನ್ನುವ ಪಾಶ್ಚಾತ್ಯರ ನೀತಿಯು ಸಂಬಂಧವನ್ನೊಪ್ಪಲಿಕ್ಕಿಲ್ಲ. ಆದರೆ ಕಾಂತಾಸಮ್ಮಿತಿಯ ಉಪದೇಶದ ರೀತಿಯನ್ನು ಸಿದ್ಧಾಂತವಾಗಿ ಸ್ವೀಕರಿಸಿದ ನಮ್ಮಲ್ಲಿಯ ಸಾಹಿತ್ಯ ನೀತಿಯ ಹೊಣೆಯನ್ನು ಹಾರಿಸಿಕೊಳ್ಳಬಾರದು. ಅ.ನ.ಕೃ. 'ಕಲೆಯನ್ನು ಗಂಭೀರವಾಗಿ ಪರಿಗಣಿಸಿದ್ದರಿಂದಲೇ ಅವರ ಬರವಣಿಗೆಯ ಸದುಪಯೋಗವಾಗಲಿಲ್ಲ. ಅವರು ಮೂಲತಃ ವಿಚಾರವಾದಿಯೂ ಅಲ್ಲವಾಗಿ ಅನೇಕ ಸಮಸ್ಯೆಗಳನ್ನು ಭಾವನಾಪರವಶತೆಯಲ್ಲಿ ತೇಲಿಸುತ್ತಾರೆ. ವೈಚಾರಿಕ ಹಿನ್ನೆಲೆ ಇರದ ಪ್ರಗತಿಶೀಲತೆಯೂ ಅವರ ವ್ಯಕ್ತಿತ್ವದ ಪ್ರಭಾವ ಮಾತ್ರ. ಅವರ ಸಾಹಿತ್ಯದ ಹೃದಯದಲ್ಲೇ ಬೌದ್ಧಿಕ ತಪ್ಪು ತಿಳುವಳಿಕೆಯ ಮಂಜು ಮುಸುಕಿದೆ. ಅವರು ಜೀವನವೆಂದು ಹಿಡಿದದ್ದು ಕನಸಾಗುತ್ತದೆ. ಭಾವಪ್ರಪಂಚ ತರಲವಾಗುತ್ತದೆ. ಆದರಿಂದ ವಸ್ತುವಿನ ಕೊರತೆಯನ್ನು ಸ್ವಂತ ಕನಸುಗಳಿಂದ ತುಂಬುತ್ತಾರೆ.' (ಕಾದಂಬರಿ–ವಾಸ್ತವಮಾರ್ಗ, ಕೆ.ಡಿ. ಕುರ್ತಕೋಟಿ, ೨೫೭–೬೫.) ಹೀಗೆ ಈ ಗ್ರಂಥದಿಂದ ರಾಯರು ತಮ್ಮ ವಾದವನ್ನು ಸಮರ್ಥಿಸಿಕೊಂಡರೂ, ಸಮರ್ಥನೆ ನಿಲ್ಲಲಿಲ್ಲ. ಆದರೆ ಗ್ರಂಥ ಮಾತ್ರ ನಮ್ಮ ದೇಶದಲ್ಲೇ ವಿಶಿಷ್ಟವೆನಿಸಿ ನಿಂತಿದೆ.

೫

ಸಾಹಿತ್ಯ ವಿಮರ್ಶೆಯಂತೆ ರಾಯರ ಕಲಾವಿಮರ್ಶೆಯೂ ಗಮನಾರ್ಹವಾಗಿವೆ. ವಿವಿಧ ಆಸಕ್ತಿಯಿಂದಾಗಿ ಕಾರಂತರಂತೆ ಅವರೂ ಒಳ್ಳೆಯ ಕಲಾವಿಮರ್ಶಕರಾಗಿ ಸಂಸ್ಕೃತಿ–ಚಿತ್ರ–ಶಿಲ್ಪ–ನಾಟ್ಯ– ಸಂಗೀತಗಳ ಬಗ್ಗೆ ತಕ್ಕಮಟ್ಟಿಗೆ ಬರೆದಿದ್ದಾರೆ. 'ಸಂಸ್ಕೃತಿಯ ವಿಶ್ವರೂಪ'ದಲ್ಲಿ ಭಾರತೀಯ ಕಲೆಯ

ಹುಟ್ಟು ಹರಹು–ಸಂಸ್ಕೃತಿ–ನಮ್ಮ ಕಲಾಕ್ಷೇತ್ರದ ಬೆಳವಣಿಗೆ– ಬದುಕು– ಇಂದಿನ ಸ್ಥಿತಿಗತಿಗಳ ಅವಲೋಕನವಿದೆ. 'ರಾಜಾರಾಮ ಮೋಹನರಾಯ್– ನಮ್ಮ ಕಲಾವಿದರು'ಗಳ ಜೊತೆಗೆ ವಿಜಯನಗರ ಸಂಸ್ಕೃತಿ–ಲಲಿತಕಲೆ– ಭಾರತೀಯ ಚಿತ್ರಕಲೆಯ ವಿಕಾಸ– ಹೊಯ್ಸಳಶಿಲ್ಪ–ಗೀತಾಸಂದೇಶ ಭಾರತ ರಕ್ತ– ಭಾವೈಕ್ಯ–ಕರ್ನಾಟಕದ ಸಾಂಸ್ಕೃತಿಕ ಪರಂಪರೆ ಎಂಬಂಥ ಬರಹಗಳನ್ನೂ ಕೊಟ್ಟವರು ಅ.ನ.ಕೃ.

ರಂಗಭೂಮಿಗೆ ಸಂಬಂಧಿಸಿದ ಲೇಖನಗಳಲ್ಲಿ ರಂಗಶಾಸ್ತ್ರದ ದುಸ್ಥಿತಿ– ಪಾತ್ರನಿರ್ಮಿತಿ– ಸಂಗೀತ ಪರಿಣತಿಯ ಪರಿಶೀಲನೆ ಇವೆ. ನಮ್ಮವರ ನಾಟಕ ವಿಭಜನೆಯನ್ನು 'ಕೃಷ್ಣನದಾದರೆ ಪೌರಾಣಿಕ–ಕೃಷ್ಣರಾಯನದು ಐತಿಹಾಸಿಕ– ಕೃಷ್ಣಮೂರ್ತಿಯದು ಸಾಮಾಜಿಕ' ಎಂಬಂತೆ ಸೂಚಿಸಿದ್ದಾರೆ. ಕೈಲಾಸಂ ಹೆಣ್ಣನ್ನು ತಾಯಂತೆ ಪೂಜಿಸಿದರೂ ವಿದ್ಯಾವತಿ ಎಂದು ಹೇಳಿದುದೇಕೆ? ಜಾತಿ ಮತಗಳ ಕಟ್ಟು ಸಡಿಲಿಸಿದವರು ಅದರ ಪ್ರಾಶಸ್ತ್ಯ ಎತ್ತಿ ಹಿಡಿದುದೇಕೆ? ಎಂದು ಪ್ರಶ್ನಿಸಿದರೂ ವಿಕೃತಿಯ ಹಿಂದಣ ಪ್ರಕೃತಿ ಕಾಣುವ ಕೈಲಾಸರ ವಿದೂಷಕ ಸಮ್ಮತಿಯನ್ನು ಕೊಂಡಿದ್ದಾರೆ. ಆದರೆ ಕೈ cult ದಿಂದ ರಂಗಭೂಮಿ ಕೇವಲ ವಿದ್ಯಾವಂತರದಾಯ್ತೆಂದೂ ಹೇಳಲು ಮರೆತಿಲ್ಲ. 'ಪ್ರಯೋಗ ದಾರಿದ್ರ್ಯ ಕೈ ನಂತರದ ನಾಟಕಕಾರರ ಪ್ರತಿಭಾ ಪ್ರದರ್ಶನ ಚಮತ್ಕಾರ–ಚಾಟಶಕ್ತಿ ಪ್ರಾಧಾನ್ಯ– ನಾಟಕವನ್ನು ಕಲೆಯಾಗಿ ಕಾಣದಿರುವುದು ಇವೆಲ್ಲ ನಾಟಕದ ಅವನತಿಗೆ ಕಾರಣ' ಎಂದು ವಿಶ್ಲೇಷಿಸಿದ್ದಾರೆ.

೬

'ಅಚ್ಚ ಕೆಚ್ಚು– ನೂರಕ್ಕೆ ನೂರು ಶೈಸೆ ಕನ್ನಡ ಅಭಿಮಾನಕ್ಕೆ ಉಸಿರೂದಿ, ಮೈಕೊಟ್ಟು ಭೂಮಿಗಿಳಿಸಿದರೆ ಅದು ಅ.ನ.ಕೃ. ಎಂಬ ಮನುಷ್ಯನಾಗುತ್ತದೆ! (ಕನ್ನಡ ಕಟ್ಟಿದವರು– ಕು.ಶಿ. ಹರಿದಾಸಭಟ್ಟ ಪು. ೬೨) ರಾಯರ ಕನ್ನಡದ ಅಭಿಮಾನವೇ ಅವರನ್ನು ವಾಗ್ಮಿಯಾಗಿಸಿತು, ಸಾಹಿತಿಯಾಗಿಸಿತು, ಹಲವು ಹೋರಾಟಗಳ ಕಲಿಯಾಗಿಸಿತು. ಕನ್ನಡಿಗರಲ್ಲಿ ತಮ್ಮತನದರಿವು ಮೂಡಿಸಿದ್ದೇ ಅವರ ಹಿರಿಯ ಸಾಧನೆ. ಕರ್ನಾಟಕದ ರಾಜಕೀಯ–ಸಾಹಿತ್ಯಿಕ ಸಾಂಸ್ಕೃತಿಕ ವಿಷಯಗಳ ಬಗ್ಗೆ ಅವರ ಪ್ರಾಸಂಗಿಕ

ಬರಹ 'ಅಖಂಡ ಕರ್ನಾಟಕ– ಕನ್ನಡದ ದಾರಿ–ಕರ್ನಾಟಕದ ಹಿತಚಿಂತನೆ-ಬಳ್ಳಾರಿಯ ಸಮಸ್ಯೆ' ಇತ್ಯಾದಿಗಳಲ್ಲಿವೆ. ಉದಾಹರಣೆಗೆ '೪೮ರಲ್ಲಿ ಪರಿಷದಧ್ಯಕ್ಷ ದಿವಾಕರರು ಹಿಂದಿ ಪ್ರಚಾರಕ್ಕಿಳಿದಾಗ 'ಇದೇ ವರ್ಷ ಬಳ್ಳಾರಿಯಲ್ಲಿ ಸಮ್ಮೇಳನಾಧ್ಯಕ್ಷ ಪಟ್ಟ ಕಟ್ಟಿಸಿಕೊಂಡ ಶ್ರೀ ದಿವಾಕರರು ತಮ್ಮ ಕರ್ತವ್ಯ ಮರೆತುದು ಶೋಚನೀಯ. ಶ್ರೀಯುತರು ಕನ್ನಡ ಪ್ರಚಾರಕ್ಕೆ ಹೋರಡಬೇಕಿತ್ತು. ನಾಡಿನ ತುತ್ತಾದ ಏಕೀಕರಣಕ್ಕೆ ಕುತ್ತು ಒದಗಿದಾಗ ಶ್ರೀಯುತರು ಹಿಂದಿಪ್ರಚಾರಕ್ಕೆ ಹೊರಟಿದ್ದಾರೆ: ಸ್ವಂತ ಮನೆ ಹತ್ತಿ ಉರಿಯುತ್ತಿರುವಾಗ ಪಕ್ಕದ ಮನೆಯಲ್ಲಿ ತೋಟ ಮಾಡಹೋದಂತೆ' ಎಂದು ಗುಡುಗಿದರು ಅ.ನ.ಕೃ. (ಕನ್ನಡದ ದಾರಿ ಪು. ೩೧) ಇದಕ್ಕೆ ಪ್ರತಿಕ್ರಿಯೆ ಬಂದಾಗ ಕನ್ನಡ ನುಡಿ ಪತ್ರಿಕೆಯ ಸಂಪಾದಕತ್ವವನ್ನೇ ಬಿಟ್ಟ ಕಾರಣ 'ದಿವಾಕರರ ಸಂತೋಷ ಪೀಠದ ಮೇಲೆ ಇವರ ಬಲಿಯಾಯಿತು.' ಆದರೂ 'ನನ್ನಂಥವರು ಕನ್ನಡಕ್ಕೆ ಅನೇಕರಿದ್ದಾರೆ. ನನಗಿರುವುದು ಒಂದೇ ಕನ್ನಡ' ಎಂದು ಶ್ರೀ ಕುವೆಂಪುವಿನಂತೆ ಕನ್ನಡಕ್ಕೆ ದುಡಿದರು ರಾಯರು. 'ಕನ್ನಡಿಗರ ಗುರಿ ಕನ್ನಡ ಜನತೆಯ ಉದ್ಧಾರ. ತ್ಯಾಗರಾಜಾದಿಗಳ ಪೋಷಣೆಯಲ್ಲ. ಅದಕ್ಕಾಗಿ ಅಗತ್ಯವಾದರೆ ತ್ಯಾಗರಾಜರ ಕೃತಿ ಬಲಿದಾನ ಅರ್ಪಿಸಬೇಕು' ಎನ್ನಲೂ ಅವರು ಹಿಂಜರಿಯಲಿಲ್ಲ. ಅಲಕ್ಷಿತ ಕನ್ನಡ ಮತ್ತೆ ಮೆರೆಯಬೇಕೆಂಬ ಅಭಿಲಾಷೆಯಿಂದ ಅವರು ಮಾಡಿದ ಭಾಷಣಗಳನ್ನು ಧ್ವನಿ ಮುದ್ರಿಸಿಕೊಂಡಿದ್ದರೆ ಅದೇ ಒಂದು ಸಾಹಿತ್ಯಭಾಗವಾಗುತ್ತಿತ್ತು. 'ಆಧುನಿಕ ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ–ನಾಡು ನುಡಿ ಕಟ್ಟಿ ಬೆಳೆಸುವ ಪುಣ್ಯ ಕಥೆಯಲ್ಲಿ ಅ.ನ.ಕೃ. ವಿಶಿಷ್ಟೋಜ್ವಲ ಹೆಸರು'. (–ಪ್ರಬುದ್ಧ ಕರ್ನಾಟಕ ೫೦–೨.)

೭

ಅ.ನ.ಕೃ. ಕವಿತೆಯನ್ನೂ ಬರೆದಿರುವರೆಂದರೆ ಯಾರಿಗೂ ತುಸು ಅಚ್ಚರಿ ಎನಿಸುವಂತಿದೆ. ಆದರೆ ಅವರಿಗೆ ಕಾವ್ಯಾಭಿರುಚಿಯೂ ಇತ್ತು. ಅಂತೆಯೇ 'ಪ್ರಣಯಗೀತೆ'ಯನ್ನು ಸಂಪಾದಿಸಿದರು. ಅಲ್ಲದೆ 'ರಸಋಷಿ' ಎಂಬ ಸಂಕಲನದಲ್ಲಿ ತಾವೇ ಪರ್ಶಿಯನ್ ಮೂಲದ ಭಾವಾರ್ಥ ಗ್ರಹಿಸಿ ಉಮರ ಖಯ್ಯಾಂನ ೫೧ ಪದ್ಯಗಳನ್ನು ಅನುವಾದಿಸಿ ಕೊಟ್ಟರು. ಅದರ ಬಗ್ಗೆ

'ಇಲ್ಲಿ ಉಮರನ ಮೂಲ ರುಬಾಯಿಯಾತ್‌ಗಳ ಪರಿಚಯ ಮಾಡಿಕೊಡಲಾಗಿದೆ. ಫಿಟ್ಜ್ ಜೆರಾಲ್ಡ್ ಉಮರನ ವಿಚಾರಗಳನ್ನು ತನ್ನ ಎರಕದಲ್ಲಿ ಹೊಯ್ದು ಅದರ ನಿಜಸ್ವರೂಪ ಮರೆಮಾಚಿದ ಎಂದರು. ಜೆರಾಲ್ಡನ ಆಂಗ್ಲಾನುವಾದದೊಡನೆ ರಾಯರ ಅನುವಾದ ಹೋಲಿಸಿದರೆ ಈ ಮಾತು ಮನದಟ್ಟಾಗುತ್ತದೆ. ಉದಾಹರಣೆಗೆ—

ಸುಂದರ ವಸಂತ ಮಾಸದಲಿ ನದಿಯ ತೀರದಲಿ
ಚೆಲುವೆಯೊಬ್ಬಳು ಪಾನಪಾತ್ರೆ ನೀಡೆ;
ಅದೆ ಸಗ್ಗ ನನ್ನ ಸುಖ; ಎಲ್ಲರೊಪ್ಪದೆ ಇರಲಿ,
ನಾನಲ್ಲ ಕುನ್ನಿ ಮೊಗ ತಿರುಹಲಿಕೆ ನೋಡೆ.
ಮಧುವ ತುಂಬಿದ ಹೂಜಿ, ಸನಿಹದಲಿ ಮನದನ್ನೆ
ಹಸಿರು ಹಾಸಿರೆ ಬೇಕು ಇದೆ ಸಗ್ಗಕಿಂತ,
ಆಡುವರು ನಾಕ ನರಕಗಳೆಂಬ ನುಡಿಯನ್ನೆ,
ನರಕಕ್ಕೈದವರು –ಸಗ್ಗದೆ ಬಂದರಾರು ?

ಪದ್ಯದ ಕೊನೆಯ ವಿವರ (ವ್ಯಾಕರಣ ಶುದ್ಧವಿರದಿದ್ದರೂ) ಆಂಗ್ಲಾನುವಾದದಲ್ಲಿಲ್ಲ–

Here with a loaf of bread beneath the bow
a flask of wine, a book of verse & thou
beside me singing in the wilderness
& wilderness is paradise enow.

ಡಿ.ವಿ.ಜಿ. ಈ ಆಂಗ್ಲಾನುವಾದ ಅವಲಂಬಿಸಿ ಉಮರನ ಒಸಗೆಯನ್ನು ಕನ್ನಡಿಸಿರುವುದು ನಿಜ. ಆದರೆ ಅ.ನ.ಕೃ. ಈ ರುಬಾಯಿಯಾತ್ ಬಗ್ಗೆ ಬರೆದಂತೆ ಕಾವ್ಯಾನುವಾದವನ್ನೂ ಪೂರೈಸಿದ್ದರೆ ಗದ್ಯದಂತೆ ಪದ್ಯಕ್ಕೂ ಅವರ ಒಳ್ಳೆಯ ಕೊಡುಗೆ ಸಲ್ಲುತ್ತಿತ್ತು.

೮

ಅ.ನ.ಕೃ. ೧೨ ಗ್ರಂಥಗಳನ್ನು ಸಂಪಾದಿಸಿದ್ದಾರೆ. ಅವುಗಳಲ್ಲಿ 'ಮರುಳಸಿದ್ಧ ಕಾವ್ಯ'ದಂಥ ಉಪೇಕ್ಷಿತ ಪ್ರಾಚೀನ ಕೃತಿ ಇದೆ, ಜನ್ಮತಃ

ಮಾದಿಗನಾದರೂ ಮರುಳಸಿದ್ಧ ವೀರಶೈವ ಪಂಚಾಚಾರ್ಯರಲ್ಲಿ ಒಬ್ಬನೆನಿಸಿದ. ಅವನನ್ನು ಕುರಿತ ೬ ಸಂಧಿಗಳ ಈ ಕೃತಿ ದೇವಕವಿಯಿಂದ ೧೫೭೭ರಲ್ಲಿ ರಚಿತವಾಯಿತು. ಅಪೂರ್ಣವೂ ದೋಷಪೂರ್ಣವೂ ಆದ ಪ್ರತಿಯನ್ನೇದು ಒಂದೇ ಪ್ರತಿಯ ಆಧಾರದಿಂದ ಇದನ್ನು ಸಂಪಾದಿಸಿದ ರಾಯರು 'ಪಾಠಗಳು ತಪ್ಪಾಗಿದ್ದರೂ ನಮಗೆ ದೊರೆತಂತೆಯೆ ಇಡುವುದು ಒಳ್ಳೆಯದು. ಮುಂದೆ ಹೆಚ್ಚು ಪ್ರತಿ ದೊರೆತಾಗ ಖಚಿತ ಪಾಠ ನಿರ್ಣಯಕ್ಕೆ ಅನುಕೂಲವಾಗುತ್ತದೆ' ಎಂದಿರುವುದು ಉಚಿತವೇ ಆಗಿದೆ. ಕೃತಿಯಲ್ಲಿ ರಾಘವಾಂಕನ ಪ್ರಭಾವವಿದ್ದರೂ ಅವನ ಹೆಸರಿಲ್ಲ. 'ಕೃತಿ ಮುಖ್ಯವಾಗಿ ಚರಿತ್ರೆ.... ಮರುಳಸಿದ್ಧ ಹುಟ್ಟಿದ್ದು ಊರು ಬಿಟ್ಟಿದ್ದು— ಸವಾಡ ವರ್ಣಿತವಾಗಿವೆ. ಅವನ ನೈತಿಕ ಆಧ್ಯಾತ್ಮಿಕ ಬೆಳವಣಿಗೆ ಇಲ್ಲ.... ಒಟ್ಟಿನಲ್ಲಿದು ಉತ್ತಮ ಕಾವ್ಯವಲ್ಲ.' ಕೊನೆಯ ಸಂಧಿಯ ಉಜ್ಜಯಿನಿ ವರ್ಣನೆ ಶೃಂಗಾರಕ್ಕಾಗಿ ಬಂದಿದೆ.

ಮಾಜಿ ಮುಖ್ಯಮಂತ್ರಿ ಹನುಮಂತಯ್ಯ ಸ್ಥಾಪಿಸಿದ ಸಾಹಿತ್ಯ-ಸಂಸ್ಕೃತಿ ಇಲಾಖೆಗಾಗಿ, ರಾಯರು '೫೭ರಲ್ಲಿ ಸಂಪಾದಿಸತೊಡಗಿದ 'ಭಾರತೀಯ ಸಂಸ್ಕೃತಿ ದರ್ಶನ' ೬೭ರಲ್ಲಿ ಪ್ರಕಟವಾಯಿತು. ೪೭ ವಿದ್ವಾಂಸರು ೬೦೦ ಪುಟಗಳಲ್ಲಿ ವಿಷಯವನ್ನು ಸಿಂಹಾವಲೋಕಿಸಿದ್ದಾರೆ. ಭಾರತವಿಜ್ಞಾನ ಜಾನಪದ ಕಲೆ-ರಸ ಪರಿಕಲ್ಪನೆ— ಕಾಮಶಾಸ್ತ್ರಾದಿ ಕೆಲ ವಿಷಯದ ಕೊರತೆ ಇದೆ. ಆದರೂ ಗ್ರಂಥ ಒಂದು ವರ್ಷದಲ್ಲಿ ಮಾರಿ ಹೋಯಿತು.

ಇದಕ್ಕೆ ಪೂರಕವೆಂಬಂತೆ 'ಭಾರತೀಯ ಕಲಾದರ್ಶನ' ೬೪ರಲ್ಲಿ ಸಂಗೀತ-ನಾಟಕ ಅಕಾಡೆಮಿಗೆ ಸಂಪಾದಿತವಾಯಿತು. ಇದರಲ್ಲಿ ಸಂಗೀತ-ನಾಟ್ಯ-ನಾಟಕಗಳ ಬಗ್ಗೆ ೫೪ ಲೇಖನ ೪೪೦ ಪುಟ ಆವರಿಸಿದ್ದು, ೩೧ ಚಿತ್ರ ಬೇರೆ ಇವೆ. ಮೊದಲ ೧೫೦ ಪುಟ ಹಿಂದುಸ್ತಾನೀ ಕರ್ನಾಟಕೀ ಸಂಗೀತಗಳ ಬಗ್ಗೆ ೧೯ ಬರಹಗಳಿವೆ; ಜಾನಪದ ಗಾಯನಕ್ಕೂ ಲೇಖನವಿದ್ದರೆ ಪೂರ್ಣವೆನಿಸುತ್ತಿತ್ತು. ಮುಂದಿನ ೧೫೫ ಪುಟಗಳಲ್ಲಿ ಮಾರ್ಗ ನೃತ್ಯಕ್ಕೆ ೧೬ ಬರಹಗಳಿದ್ದರೂ ಕರ್ನಾಟಕೇತರ ಜಾನಪದದ ವಿವರಗಳಿಲ್ಲ. ಕನ್ನಡ ರಂಗಭೂಮಿ— ನಾಟಕದ ಬಗ್ಗೆ ಕೊನೆಯ ೧೫೦ ಪುಟಗಳಲ್ಲಿ ೧೭ ಲೇಖನ ಇದ್ದವರಲ್ಲಿ ರಾ.ಯ.ಧಾ.— ತ.ಸು. ಶಾಮರಾವ— ಸಂಕಾಪುರ— ಸಿ.ಕೆ. ವೆಂಕಟರಾಮಯ್ಯ, ಪುತಿನ— ಪುಟ್ಟಸ್ವಾಮಯ್ಯ—ಎಸ್ಕೆ— ಶ್ರೀರಂಗ—ಕಾರಂತ—ಎಚ್ಕೆ ಮುಂತಾದ ಸಾಹಿತಿ

ಗಳಿದ್ದು, 'ರಂಗಭೂಮಿಯ ಪದ್ಯದ ಸ್ಥಿತಿ' ಎಂಬುದರಲ್ಲಿ ಸ್ವತಃ ಅ.ನ.ಕೃ. 'ಸರಕಾರ ಇನ್ನು ಮುಂದೆಯೂ ನಾಟಕ ಕಲೆಯನ್ನು ನಿರ್ಲಕ್ಷಿಸುತ್ತ ಬಂದರೆ ರಾಷ್ಟ್ರ ತನ್ನ ಕಲಾರತ್ನವನ್ನು 'ಕಳೆದುಕೊಳ್ಳುತ್ತದೆ' ಎಂಬಂಥ ಎಚ್ಚರ ನೀಡಿದ್ದಾರೆ. 'ನೃತ್ಯರೂಪಕ- ಶಿಕ್ಷಣದಲ್ಲಿ ಸಂಗೀತ ನೃತ್ಯ ನಾಟಕಗಳ ಸ್ಥಾನ' ಇವು ಅನುಬಂಧದ ಬರಹವಾಗಿ ಬಂದಿವೆ.

ಇನ್ನುಳಿದ ಸಂಪಾದಿತ ಗ್ರಂಥಗಳಲ್ಲಿ ಹೆಸರಿಸಬೇಕಾದುವು ಚೆನ್ನಬಸವನ ಅಕ್ಕಮಹಾದೇವಿ ಪುರಾಣ, ಶ್ರೀಕೃಷ್ಣಯೋಗಿಯ ಭಗವದ್ಗೀತಾರ್ಥಸಾರ, ಪ್ರಣಯಗೀತೆ- ರಸಋಷಿ ಕವನಸಂಗ್ರಹ, ಕಾಮನಬಿಲ್ಲು (೨ ಕಥಾ ಸಂಗ್ರಹ), ರಷ್ಯಾದ ಕಥೆಗಳು, ಪ್ರಗತಿಶೀಲ ಸಾಹಿತ್ಯಪ್ರಬಂಧಸಂಗ್ರಹ. ಕೊನೆಯದರಲ್ಲಿ ರಾಯರೇ ಬರೆದ ಪುರೋಗಾಮಿ ಸಾಹಿತ್ಯ- ಯುದ್ಧ ಸಾಹಿತ್ಯ-ಕನ್ನಡದ ಮೇಲೆ ಅಪಪ್ರಚಾರ-ಕನ್ನಡ ಚಲಚ್ಚಿತ್ರೋದ್ಯಮ' ಎಂಬ ೪ ನಿಬಂಧಗಳಿವೆ.

ಈ ಗ್ರಂಥಗಳನ್ನಲ್ಲದೆ ಅ.ನ.ಕೃ. ಕೆಲ ಪತ್ರಿಕೆಗಳನ್ನೂ ಸಂಪಾದಿಸಿದ್ದಾರೆ. ಅವುಗಳಲ್ಲಿ ಕಥಾಂಜಲಿ ('೨೮-'೩೦), ಬಾಂಬೆ ಕ್ರಾನಿಕಲ್, ವಿಶ್ವವಾಣಿ ('೩೬), ಕನ್ನಡ ನುಡಿ ಸಾಪ್ತಾಹಿಕ ('೩೯), ಪರಿಷತ್ ಪತ್ರಿಕೆ ('೪೪), ಬಹು ಮುಖ್ಯವಾದುವು.

೯

ಅ.ನ.ಕೃ. ಅವರ ಇತರ ಕೃತಿಗಳಲ್ಲಿ 'ಹೊಸ ಹುಟ್ಟ'ನಂತಹ ('೩೧) ಪ್ರಬಂಧ ಸಂಗ್ರಹ, 'ಪೊರಕೆ'ಯಂತಹ ಹರಟೆಗಳ ಸಂಗ್ರಹ ಅಪರೂಪದ ಕೃತಿಗಳೆನ್ನಬೇಕು. ಈ ಸ್ವತಂತ್ರ ರಚನೆಗಳಲ್ಲದೆ 'ರುಬಾಯಿಯಾತ್- ಭಾರತದ ಕಥೆ-ರಸಿಕಾಗ್ರಣಿ-ನೀಲಲೋಚನೆ' ಇತ್ಯಾದಿ ಅನುವಾದಗಳನ್ನೂ, ಇಂಗ್ಲಿಷದಲ್ಲಿ ಬರೆದ Basava-Mahadevi- Allama - Studies in Veerashaiva Mysticism ಮೊದಲಾದುವನ್ನೂ ಈ ಸಂದರ್ಭದಲ್ಲಿ ಸ್ಮರಿಸಲೇಬೇಕು.

೧೦

ಅಂತೂ ರಾಯರು ಹಲವು ಜನ್ಮದ ಕೆಲಸವನ್ನು ಒಂದೇ ಜನ್ಮದಲ್ಲಿ ಮಾಡಿಮುಗಿಸಿದಂತಿದೆ. ನಿಯತ ಪದವೀಧರರಲ್ಲದ್ದರಿಂದಲೋ ಏನೋ, ಅಲ್ಲಲ್ಲಿ ತೋರುವ ಚಂದ್ರಕಳಂಕದಂತಹ ಕೆಲ ಅಪಪ್ರಯೋಗ ಬಿಟ್ಟರೆ, ವಿಶ್ವವೇ ಅವರ ವಿದ್ಯಾಲಯವಾಗಿ ಪರಿಣಮಿಸಿದ್ದು ಬರವಣಿಗೆಯಿಂದ ವಿದಿತವಾಗುತ್ತದೆ. ನೀರು ವಿಸ್ತಾರವಾಗಿ ಹರಡಿದಷ್ಟೂ ಆಳ ಕಳೆದುಕೊಳ್ಳುವಂತೆ ರಾಯರ ಬರವಣಿಗೆಯೂ ತುಂಬ ಹರವಾಗಿದೆ. ಆದರೆ ಆಳವಾಗಲಿ ಎತ್ತರವಾಗಲಿ ಎಲ್ಲ ಕಡೆ ಏಕಪ್ರಕಾರವಾಗಿಲ್ಲ. ಅಂತೆಯೇ ಅ.ನ.ಕೃ. ಬರೆದುದೆಲ್ಲ ಶ್ರೇಷ್ಠ ಸಾಹಿತ್ಯವಲ್ಲದಿದ್ದರೂ, 'ಶ್ರೇಷ್ಠ ಸಾಹಿತ್ಯ ಬರೆದಿಲ್ಲ ಎನ್ನಲಾಗದು.' ಸಂಧ್ಯಾರಾಗ ಅದಕ್ಕೆ ಸ್ಪಷ್ಟನಿದರ್ಶನ.

**ನೆರವು**

ಅ.ನ.ಕೃ. ಅವರ ವಿಮರ್ಶಾಗ್ರಂಥಗಳು
ರಸಚೇತನದ ಲೇಖನಗಳು
ಕನ್ನಡ ಕಟ್ಟಿದವರು ಎಂಬಂಥ ಕಿರುಹೊತ್ತಗೆ ಇತ್ಯಾದಿ.

———

# ಈ ಮಾಲೆಯ ಪ್ರಕಟನೆಗಳು

---

೧. ನಿಜಗುಣ ಶಿವಯೋಗಿ ಹಾಗೂ ಅವರ ಕೃತಿಗಳು (ತೃ. ಮು.) ೧-೦೦
೨. ಮಹಾಕವಿ ರನ್ನ ಹಾಗೂ ಅವನ ಕೃತಿಗಳು (ತೃ. ಮು.) ೨-೦೦
೩. ಮಹಾಕವಿ ಪಂಪ ಹಾಗೂ ಅವನ ಕೃತಿಗಳು (ತೃ. ಮು.) ೨-೦೦
೪. ಸರ್ವಜ್ಞ ಕವಿ: ಜೀವನ ಹಾಗೂ ಕಾವ್ಯ (ತೃ. ಮು.) ೪-೦೦
೫. ಬಸವಣ್ಣನವರ ವ್ಯಕ್ತಿತ್ವ ಹಾಗೂ ಜೀವನಸಿದ್ಧಿ (ದ್ವಿ. ಮು.) ೩-೦೦
೬. ಸಾಹಿತ್ಯ ವಿಮರ್ಶೆ (ದ್ವಿ. ಮು.) ೩-೦೦
೭. ಗಾಂಧೀತತ್ವ ವಿಶ್ಲೇಷಣೆ ೧-೫೦
೮. ದಾಸ ಸಾಹಿತ್ಯ: ದ್ವಿತೀಯ ಘಟ್ಟದ ಸಾಧನೆ ೨-೫೦
೯. ರೆವರೆಂಡ್ ಚನ್ನಪ್ಪ ಉತ್ತಂಗಿ: ಜೀವನ ಹಾಗೂ ಕೃತಿಗಳು ೨-೫೦
೧೦. ಸಿದ್ಧರಾಮ ಸಾಹಿತ್ಯ ಸಮೀಕ್ಷೆ ೨-೫೦
೧೧. ಅರವಿಂದರ ಸುಪ್ರಮಾನಸ ದರ್ಶನ ೨-೫೦
೧೨. ಕರ್ನಾಟಕಾಂಧ್ರ ಸಾಹಿತ್ಯ ಬಾಂಧವ್ಯ ೨-೫೦
೧೩. ಕನ್ನಡ ರಂಗಭೂಮಿ: ಅಂದು, ಇಂದು ೩-೦೦
೧೪. ಸಾಮಾಜಿಕ ಪರಿವರ್ತನೆ ೪-೦೦
೧೫. ಕನ್ನಡದಲ್ಲಿ ಷಟ್ಪದಿ ಸಾಹಿತ್ಯ ೫-೦೦
೧೬. ಕರ್ನಾಟಕ ಮತ್ತು ಜೈನ ಸಂಸ್ಕೃತಿ ೫-೦೦
೧೭. ಕಿತ್ತೂರು ನಾಡಿನ ಇತಿಹಾಸ ಹಾಗೂ ಸಂಸ್ಕೃತಿ ೮-೦೦
೧೮. ಹರ್ಡೇಕರ ಮಂಜಪ್ಪನವರು: ಜೀವನ ಮತ್ತು ಕೃತಿಗಳು ೧೦-೦೦
೧೯. ಆಧುನಿಕ ಸಮಾಜ ಹಾಗೂ ಕೌಟುಂಬಿಕ ಜೀವನದ ಬದಲಾವಣೆಗಳು ೧೦-೦೦
೨೦. ಆಲೂರು ವೆಂಕಟರಾಯರು: ಜೀವನ ಹಾಗೂ ಕೃತಿಗಳು ೧೦-೦೦
೨೧. ಯಕ್ಷಗಾನ ೧೨-೦೦
೨೨. ವಚನ ಸಾಹಿತ್ಯ ವಿವೇಚನೆ (ಅಚ್ಚಿನಲ್ಲಿ)

---

ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ